officer will present the bill drawing money from the Contingency Fund. The treasury will release funds only when Finance Departments separate sanction order is enclosed to the Government Order.

The amount provided in the Contingency Fund for the year 2006-07 under the head of account 6860-04-190-1-16 (plan) 394 loans shall be debited as loan in respect of Co-operative sugar factories and Private sugar factories to the head of account 6860-04-190-1-16(P) 394 loans and the equal amount shall be taken as receipt under head of account 0040-00-102-0-01 sale tax by contra entry as receipt from the concerned sugar factories towards purchase tax on sugar cane. This is only a book adjustment and no cash out go involved. As there is no provision is made in the budget 2006-07 for this purpose.

(Rs. in Lakhs)

| Sl. No. | Name of the Societies | Year | Private | Co-operative |
|---|---|---|---|---|
| 1 | M/s. Raitara Sahakari Sakkare Kharkhane, Mudhola | 2005-06 | - | 59,23.661 |
| 2 | M/s. Venkateshwara Power Projects Ltd., Bedakihal, Belgaum District (Sugar Factory) | 2004-05 | 61,69.265 | - |
| 3 | M/s. Athani Farmers Sugar Ltd., Navalihal, Athani Taluk, Belgaum District. | 2005-06 | 1,75,75.273 | - |
| 4 | Sri Renuka Sugars Ltd., Manoli, Belgaum District | 2005-06 | 1,29,22.791 | - |
| 5 | Sri Renuka Sugars Ltd., Manoli Belgaum District | 2004-05 | 3,29,43.736 | - |
| 6 | M/s. Jamkhandi Sugars Ltd., Jamkhandi, Bagalkote Dist. | 2005-06 | 1,55,03.743 | - |
| 7 | M/s Nirani Sugars Ltd., Mudhol, Bagalkote Dist. | 2005-06 | 4,20.786 | - |
| 8 | M/s. Shamanur Sugars Ltd., Duggavathi, Davanagere District. | 2005-06 | 1,06,44.809 | - |
| 9 | M/s. Prabhulingeshwara Sugars Ltd., Siddapura, Bagalkote District. | 2004-05 | 1,62,50.620 | - |
| 10 | M/s ICL Sugars Ltd., Makavalli, K.R. Pet Taluk, Mandya District | 2004-05 | 1,44,22.005 | - |
| | Total | | 12,68,53.078 | 53,23.661 |

The Accountant General, Bangalore is requested to carry out necessary adjustments as indicated above in the books of accounts for 2006-2007.

This order issued with the concurrence of the Finance Department vide its Note No. FD/624/EXP-1/2007 dated: 29.03.2007.

By order and in the name of the Governor of Karnataka,

**P. Ananda Kumar**

Desk Officer (Sugar)

PR - 651 Commerce & Industries Department

**CORRIGENDUM**

No. CI 296 SGF 07 Bangalore, Date: 19.09.2007

In the Government Order No. CI 86 SGF 07 dated: 30.03.2007, for the existing Para 3 of Page No. 2 & 3 the following only shall be read.

**"Finance Department will issue a separate order releasing the said amount from the contingency Fund".**

Corrigendum issued vide No. CI 296 SGF 07 dt: 10.09.07 is hereby withdrawn.

By Order and in the name of the Governor of Karnataka,

**P. Ananda Kumar**

Desk Officer (Sugar)

PR - 1730 Commerce & Industries Department

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ವಿಷಯ:** ಮೆ. ಜೆಮ್ ಶುಗರ್ಸ್ (ಲಿ), ಕುಂದರಗಿ, ಬೀಳಗಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ, ಈ ಕಾರ್ಖಾನೆಯ ಸಾಮರ್ಥ್ಯವನ್ನು ಈಗಿರುವ 2500 ಟಿಸಿಡಿಯಿಂದ 5000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಐ 187 ಎಸ್‌ಜಿಎಫ್ 07 ದಿ: 11.09.07

2. ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಡಿಇವಿ/10/96–97 ದಿನಾಂಕ: 09.10.2006

**ಪ್ರಸ್ತಾವನೆ:**

ಮೇಲೆ ಓದಲಾದ (2)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ ಮೆ. ಜೆಮ್ ಶುಗರ್ಸ್ (ಲಿ), ಕುಂದರಗಿ, ಬೀಳಗಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ, ಈ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು ಈಗಿರುವ 2500 ಟಿಸಿಡಿ ಯಿಂದ 5000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ ಈ ಕಾರ್ಖಾನೆಯ ಸಾಮರ್ಥ್ಯ ವಿಸ್ತರಣೆಗೆ ಸರ್ಕಾರದ ಅನುಮತಿಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಮೇಲೆ ಓದಲಾದ (1)ರಲ್ಲಿನ ಆದೇಶದಲ್ಲಿ ಅಳವಡಿಸಿಕೊಳ್ಳಲಾಗಿರುವ ನೀತಿಯನ್ವಯ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರ ಆದೇಶ ಸಂಖ್ಯೆ: ಸಿಐ 320 ಎಸ್‌ಜಿಎಫ್ 06 ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್, 2007**

ಮೆ. ಜೆಮ್ ಶುಗರ್ಸ್ (ಲಿ), ಕುಂದರಗಿ, ಬೀಳಗಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ, ಈ ಸಕ್ಕರೆ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು ಈಗಿರುವ 2500 ಟಿಸಿಡಿ ಯಿಂದ 5000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರದ ಅನುಮೋದನೆಯನ್ನು ಕಾರ್ಖಾನೆಗೆ ಈಗಾಗಲೇ ಹಂಚಿಕೆ ಮಾಡಿರುವ ಕಬ್ಬಿನ ಮೀಸಲು ಪ್ರದೇಶಗಳಿಂದಲೇ ಹೆಚ್ಚುವರಿಯಾಗಿ ಬೇಕಾಗುವ ಕಬ್ಬನ್ನು ಪಡೆಯಬೇಕು ಹಾಗೂ ಹೆಚ್ಚುವರಿ ಕಬ್ಬಿನ ಮೀಸಲು ಕ್ಷೇತ್ರಗಳನ್ನು ಹಂಚಿಕೆ ಮಾಡಲು ಬೇಡಿಕೆ ಸಲ್ಲಿಸಬಾರದೆಂಬ ಷರತ್ತನ್ನು ವಿಧಿಸಿ, ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ಆನಂದಕುಮಾರ್**

ಪೀಠಾಧಿಕಾರಿ (ಸಕ್ಕರೆ)

ಪಿಆರ್ – 1733 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ವಿಷಯ:** ಕೋರಮಂಡಲ್ ಶುಗರ್ಸ್ (ಲಿ), (ಐ.ಸಿಎಲ್. ಶುಗರ್ಸ್ (ಲಿ)) ಮಾಕವಳ್ಳಿ ಕೆ.ಆರ್.ಪೇಟೆ ತಾಲ್ಲೂಕು, ಮಂಡ್ಯ ಜಿಲ್ಲೆ ಈ ಕಾರ್ಖಾನೆಯ ಸಾಮರ್ಥ್ಯವನ್ನು ಈಗಿರುವ 2500 ಟಿಸಿಡಿಯಿಂದ 5000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಐ 187 ಎಸ್‌ಜಿಎಫ್ 07 ದಿ: 11.09.07

2. ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಡಿಇವಿ/106/2006-07 ದಿನಾಂಕ: 30.03.2007

**ಪ್ರಸ್ತಾವನೆ:**

ಮೇಲೆ ಓದಲಾದ (2)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ ಕೋರಮಂಡಲ್ ಶುಗರ್ಸ್ (ಲಿ), (ಐ.ಸಿಎಲ್. ಶುಗರ್ಸ್ (ಲಿ)) ಮಾಕವಳ್ಳಿ ಕೆ.ಆರ್.ಪೇಟೆ ತಾಲ್ಲೂಕು, ಮಂಡ್ಯ ಜಿಲ್ಲೆ ಈ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು ಈಗಿರುವ 2500 ಟಿಸಿಡಿ ಯಿಂದ 5000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ ಈ ಕಾರ್ಖಾನೆಯ ಸಾಮರ್ಥ್ಯ ವಿಸ್ತರಣೆಗೆ ಸರ್ಕಾರದ ಅನುಮತಿಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಮೇಲೆ ಓದಲಾದ (1)ರಲ್ಲಿನ ಆದೇಶದಲ್ಲಿ ಅಳವಡಿಸಿಕೊಳ್ಳಲಾಗಿರುವ ನೀತಿಯನ್ವಯ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರ ಆದೇಶ ಸಂಖ್ಯೆ: ಸಿಐ 104 ಎಸ್‌ಜಿಎಫ್ 07 ಬೆಂಗಳೂರು, ದಿನಾಂಕ: 22ನೇ ಸೆಪ್ಟೆಂಬರ್, 2007**

ಕೋರಮಂಡಲ್ ಶುಗರ್ಸ್ (ಲಿ), (ಐ.ಸಿಎಲ್. ಶುಗರ್ಸ್ (ಲಿ)) ಮಾಕವಳ್ಳಿ ಕೆ.ಆರ್.ಪೇಟೆ ತಾಲ್ಲೂಕು, ಮಂಡ್ಯ ಜಿಲ್ಲೆ ಈ ಸಕ್ಕರೆ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯವನ್ನು ಈಗಿರುವ 2500 ಟಿಸಿಡಿ ಯಿಂದ 5000 ಟಿಸಿಡಿ ಸಾಮರ್ಥ್ಯಕ್ಕೆ ವಿಸ್ತರಿಸಿಕೊಳ್ಳಲು ಸರ್ಕಾರದ ಅನುಮೋದನೆಯನ್ನು ಕಾರ್ಖಾನೆಗೆ ಈಗಾಗಲೇ ಹಂಚಿಕೆ ಮಾಡಿರುವ ಕಬ್ಬಿನ ಮೀಸಲು ಪ್ರದೇಶಗಳಿಂದಲೇ ಹೆಚ್ಚುವರಿಯಾಗಿ ಬೇಕಾಗುವ ಕಬ್ಬನ್ನು ಪಡೆಯಬೇಕು ಹಾಗೂ ಹೆಚ್ಚುವರಿ ಕಬ್ಬಿನ ಮೀಸಲು ಕ್ಷೇತ್ರಗಳನ್ನು ಹಂಚಿಕೆ ಮಾಡಲು ಬೇಡಿಕೆ ಸಲ್ಲಿಸಬಾರದೆಂಬ ಷರತ್ತನ್ನು ವಿಧಿಸಿ, ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿಆರ್ - 1732

**ವಿಷಯ:** ಶ್ರೀ ಭಾಲ್ಕೇಶ್ವರ ಶುಗರ್ ಅಂಡ್ ಅಲೈಡ್ ಇಂಡಸ್ಟ್ರೀಸ್ (ಲಿ), ರವರು ಬೀದರ್ ಜಿಲ್ಲೆ, ಭಾಲ್ಕಿ ತಾಲ್ಲೂಕಿನ ಬಾಜೋಳಗಾ ಗ್ರಾಮದಲ್ಲಿ ಸ್ಥಾಪಿಸಲಿರುವ 14 ಮೆ.ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 2500 ಟಿಸಿಡಿ ಸಾಮರ್ಥ್ಯದ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಐ 260 ಎಸ್‌ಜಿಎಫ್ 04 ದಿ: 16.03.05

2. ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಡಿಇವಿ/33/2006-07 ದಿನಾಂಕ: 23.12.06

**ಪ್ರಸ್ತಾವನೆ:**

ಮೇಲೆ ಓದಲಾದ (2)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ ಶ್ರೀ ಭಾಲ್ಕೇಶ್ವರ ಶುಗರ್ ಅಂಡ್ ಅಲೈಡ್ ಇಂಡಸ್ಟ್ರೀಸ್ (ಲಿ), ರವರು ಬೀದರ್ ಜಿಲ್ಲೆ, ಭಾಲ್ಕಿ ತಾಲ್ಲೂಕಿನ ಬಾಜೋಳಗಾ ಗ್ರಾಮದಲ್ಲಿ ಸ್ಥಾಪಿಸಲಿರುವ 14 ಮೆ.ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 2500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ ಈ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರ ಆದೇಶ ಸಂಖ್ಯೆ: ಸಿಐ 166 ಎಸ್‌ಜಿಎಫ್ 06 ಬೆಂಗಳೂರು, ದಿನಾಂಕ: 17ನೇ ಸೆಪ್ಟೆಂಬರ್, 2007**

ಶ್ರೀ ಭಾಲ್ಕೇಶ್ವರ ಶುಗರ್ ಅಂಡ್ ಅಲೈಡ್ ಇಂಡಸ್ಟ್ರೀಸ್ (ಲಿ), ರವರು ಬೀದರ್ ಜಿಲ್ಲೆ, ಭಾಲ್ಕಿ ತಾಲ್ಲೂಕು ಬಾಜೋಳಗಾ ಗ್ರಾಮದಲ್ಲಿ 14 ಮೆ.ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 2500 ಟಿಸಿಡಿ ಸಾಮರ್ಥ್ಯದ ಸಕ್ಕರೆ

ಕಾರ್ಖಾನೆ ಸ್ಥಾಪಿಸಲು ಸರ್ಕಾರದ ಆದೇಶ ಸಂಖ್ಯೆ: ಸಿಐ 260 ಎಸ್‌ಜಿಎಫ್ 04 ದಿನಾಂಕ: 16.03.2005ರಲ್ಲಿನ ನಿಬಂಧನೆ (ಅ)ನ್ನು ಸಡಿಲಿಸುವ ಮೂಲಕ ಹಾಗೂ ಕಾರ್ಖಾನೆಗೆ ಕಬ್ಬು ಕ್ಷೇತ್ರ ಹಂಚಿಕೆಯನ್ನು ಮಾಡುವಾಗ ಜಿಲ್ಲೆಯಲ್ಲಿನ ಇತರೆ ಕಾರ್ಖಾನೆಗಳ ಆಕ್ಷೇಪಣೆಗಳನ್ನು ಪರಿಗಣನೆ ಮಾಡುವ ಷರತ್ತಿಗೊಳಪಟ್ಟು ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲಾಗಿದೆ.

ಮುಂದುವರೆದು ಸಹವಿದ್ಯುತ್ ಘಟಕ ಸ್ಥಾಪನೆಗೆ ಅನುಮತಿಯನ್ನು ಸಂಬಂಧಪಟ್ಟ ಇಲಾಖೆಯಿಂದ ನಿಯಮಾನುಸಾರ ಪಡೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ಆನಂದಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿಆರ್ – 1734

**ವಿಷಯ:** ಶ್ರೀ ಎಸ್.ಪಿ. ರಾಜು, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಚಿತ್ರದುರ್ಗ ಇವರ ಮೇಲಿನ ಆಪಾದನೆ ಕುರಿತಂತೆ.

**ಓದಲಾಗಿದೆ:** ಆಯುಕ್ತರು ಮತ್ತು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರ ಪತ್ರ ಸಂಖ್ಯೆ: ಗಭೂಇ, ಸಿಬ್ಬಂದಿ.ಅ.2:ಉ.ನಿ.ವ:2006–07 : 3194 ದಿನಾಂಕ: 17:21.02.2007

**ಪ್ರಸ್ತಾವನೆ:**

ಆಯುಕ್ತರು ಮತ್ತು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರು ಮೇಲೆ ಓದಲಾದ ಪತ್ರದಲ್ಲಿ, ಶ್ರೀ ಎಸ್.ಪಿ. ರಾಜು, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಚಿತ್ರದುರ್ಗ, ಇವರನ್ನು ದಿನಾಂಕ: 03.08.2006 ರಂದು ತುಮಕೂರಿನಿಂದ ಚಿತ್ರದುರ್ಗಕ್ಕೆ ವರ್ಗಾಯಿಸಲಾದಂತೆ, ಅವರು ಅಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಅವರು ಉಪನಿರ್ದೇಶಕರಾಗಿ ಚಿತ್ರದುರ್ಗ ಕಛೇರಿಯಲ್ಲಿ ಅಧಿಕಾರ ವಹಿಸಿಕೊಂಡ ನಂತರ ಈ ಜಿಲ್ಲೆಯಲ್ಲಿ ವ್ಯಾಪಕವಾಗಿ ಅನಧಿಕೃತ ಗಣಿಗಾರಿಕೆ ಮತ್ತು ಖನಿಜ ರವಾನೆ ಗಣನೀಯವಾಗಿ ಹೆಚ್ಚಿರುವುದು ಗಮನಕ್ಕೆ ಬಂದಿದೆಯೆಂದು, ಈ ಬಗ್ಗೆ ಜಿಲ್ಲಾಧಿಕಾರಿ, ಚಿತ್ರದುರ್ಗ ಇವರೂ ಸಹ ಜಿಲ್ಲೆಯಲ್ಲಿ ಅನಧಿಕೃತ ಗಣಿಗಾರಿಕೆ ಮತ್ತು ಖನಿಜ ರವಾನೆ ಹೆಚ್ಚಾಗುತ್ತಿರುವ ಬಗ್ಗೆ ತಮ್ಮ ಗಮನಕ್ಕೆ ತಂದಿರುವುದಾಗಿ ತಿಳಿಸಿರುತ್ತಾರೆ. ಇದಕ್ಕೆ ಶ್ರೀ ಎಸ್.ಪಿ. ರಾಜು, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಚಿತ್ರದುರ್ಗ, ಇವರು ನೇರವಾಗಿ ಕಾರಣರಾಗಿರುತ್ತಾರೆಂದು, ಸದರಿ ಅಧಿಕಾರಿಯವರು ಅನಧಿಕೃತ ಗಣಿಗಾರಿಕೆ ಮತ್ತು ಖನಿಜ ರವಾನೆ ವ್ಯವಹಾರದಲ್ಲಿ ಶಾಮೀಲಾಗಿರುವುದು ಮೇಲ್ನೋಟಕ್ಕೆ ಕಂಡು ಬಂದಿದ್ದು, ಸದರಿಯವರನ್ನು ಇದೇ ಕಛೇರಿಯಲ್ಲಿ ಮುಂದುವರೆಸಿದಲ್ಲಿ ಅಕ್ರಮ ಗಣಿಗಾರಿಕೆ ಮತ್ತು ಖನಿಜ ರವಾನೆ ವ್ಯವಹಾರವು ಮತ್ತಷ್ಟು ಹೆಚ್ಚಾಗುವ ಸಾಧ್ಯತೆ ಇದ್ದು, ಇದರಿಂದಾಗಿ ಸರ್ಕಾರದ ಬೊಕ್ಕಸಕ್ಕೆ ಗಣನೀಯ ಪ್ರಮಾಣದಲ್ಲಿ ರಾಜಧನ ಸಂಗ್ರಹಣೆಯಲ್ಲಿ ಸೋರಿಕೆ ಉಂಟಾಗುವುದೆಂದು ತಿಳಿಸಿರುತ್ತಾರೆ. ಇದಲ್ಲದೆ, ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ಇವರು ನಡೆಸುವ ಅಧಿಕಾರಿಗಳ ಸಭೆಗೆ ಹಾಗೂ ಕೆಲವು ಅವಶ್ಯಕ ತುರ್ತು ಸಂದರ್ಭಗಳಲ್ಲಿ ಶ್ರೀ ಎಸ್.ಪಿ. ರಾಜು, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಚಿತ್ರದುರ್ಗ, ಇವರು ಗೈರುಹಾಜರಾಗುವುದು ಸಾಮಾನ್ಯವಾಗಿದ್ದು, ಇದರಿಂದಾಗಿ ಜಿಲ್ಲೆಯಲ್ಲಿ ನಡೆಯುತ್ತಿರುವ ಅಕ್ರಮ ಗಣಿಗಾರಿಕೆ ಹಾಗೂ ಖನಿಜ ಸಾಗಾಣಿಕೆಯನ್ನು ತಡೆಗಟ್ಟುವ ನಿಟ್ಟಿನಲ್ಲಿ ನಿರ್ದಿಷ್ಟ ಕ್ರಮಗಳನ್ನು ಕೈಗೊಳ್ಳಲು ಜಿಲ್ಲಾಡಳಿತಕ್ಕೆ ಕಷ್ಟವಾಗಿರುತ್ತದೆ ಎಂದು ತಿಳಿಸಿ, ಸದರಿಯವರನ್ನು ಚಿತ್ರದುರ್ಗ ಜಿಲ್ಲೆಯಿಂದ ಕೇಂದ್ರ ಕಛೇರಿಗೆ ವರ್ಗಾಯಿಸುವುದು ಅಥವಾ ಸೇವೆಯಿಂದ ಅಮಾನತ್ತುಗೊಳಿಸಲು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರು ಸರ್ಕಾರವನ್ನು ವಿನಂತಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಇಲಾಖಾ ಮುಖ್ಯಸ್ಥರು ಮಾಡಿರುವ ಆಪಾದನೆಯನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿ, ಈ ಕೆಳಕಂಡ ಆದೇಶ ನೀಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 25 ಎಂಜಿಎಸ್ 2007, ಬೆಂಗಳೂರು, ದಿನಾಂಕ: 2ನೇ ಏಪ್ರಿಲ್, 2007**

ಪ್ರಸ್ತಾವನೆಯಲ್ಲಿ ವಿವರಿಸಿದ ಸನ್ನಿವೇಶಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10(1)(ಎ) ಮತ್ತು (ಬಿ)ರನ್ವಯ ಪ್ರದತ್ತವಾದ ಅಧಿಕಾರದನ್ವಯ, ಶ್ರೀ ಎಸ್.ಪಿ. ರಾಜು, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಚಿತ್ರದುರ್ಗ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಇಲಾಖಾ ವಿಚಾರಣೆ ಕಾಯ್ದಿರಿಸಿ, ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಶ್ರೀ ಎಸ್.ಪಿ. ರಾಜು, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಚಿತ್ರದುರ್ಗ, ಇವರು ನಿಯಮಗಳ ಪ್ರಕಾರ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎಸ್.ಪಿ. ರಾಜು, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಚಿತ್ರದುರ್ಗ, ಇವರು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರಿಯವರ ಲಿಖಿತ ಅನುಮತಿ ಪಡೆಯದೆ, ಕೇಂದ್ರ ಕಾರ್ಯಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಜಯಚಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ (ಗಣಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿಆರ್ – 629

**ವಸತಿ ಸಚಿವಾಲಯ**

**ವಿಷಯ:** ಚಿಕ್ಕಮಗಳೂರು ಜಿಲ್ಲೆಯ ಬೀರೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂ.ವಇ/42/ಹೆಚ್ಎಂ/1998, ದಿನಾಂಕ: 10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಚಿಕ್ಕಮಗಳೂರು ಜಿಲ್ಲೆಯ ಬೀರೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ 27 ಹೆಚ್ಎಎಸ್ 2007 ಬೆಂಗಳೂರು, ದಿನಾಂಕ: 30ನೇ ಮಾರ್ಚ್, 2007**

ಮೇಲ್ಕಂಡ ಸಂದರ್ಭದಲ್ಲಿ ಚಿಕ್ಕಮಗಳೂರು ಜಿಲ್ಲೆಯ ಬೀರೂರು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1 | ಶ್ರೀ ಬಿ.ಆರ್. ರಮೇಶ್ ಬಿನ್ ರಘುಗಣಪಯ್ಯ<br>ವಿನಾಯಕ ನಿಲಯ, ರೈಲ್ವೆ ಕಾಲೋನಿ, ಬಳ್ಳಾರಿ ಕ್ಯಾಂಪ್, ಬೀರೂರು,<br>ಕಡೂರು ತಾಲ್ಲೂಕು | ಸದಸ್ಯರು |
| 2 | ಶ್ರೀ ಎಸ್.ಎಲ್. ಮಂಜುನಾಥ್ ಬಿನ್ ಎಸ್.ಆರ್. ಲಕ್ಷ್ಮಣಪ್ಪ<br>3ನೇ ಕ್ರಾಸ್, ನೆಹರೂ ನಗರ, ಹೊಸ ಅಜ್ಜಂಪುರ ರಸ್ತೆ, ಬೀರೂರು,<br>ಕಡೂರು ತಾಲ್ಲೂಕು | ಸದಸ್ಯರು |
| 3 | ಶ್ರೀ ಖಲೀಲ್ ಬಿನ್ ಅಬ್ದುಲ್ ಖುದ್ದೂಸ್<br>3ನೇ ಕ್ರಾಸ್, ನೆಹರೂ ನಗರ, ಹೊಸ ಅಜ್ಜಂಪುರ ರಸ್ತೆ, ಬೀರೂರು,<br>ಕಡೂರು ತಾಲ್ಲೂಕು | ಸದಸ್ಯರು |
| 4 | ಶ್ರೀಮತಿ ಭಾರತಿ ಕೋಂ ಮಲ್ಲಿಕಾರ್ಜುನ<br>ಶ್ರೀ ಮೈಲಾರಲಿಂಗಸ್ವಾಮಿ ದೇವಸ್ಥಾನದ ಹತ್ತಿರ, ಸರಸ್ವತಿ ಪುರಂ, ಬೀರೂರು<br>ಕಡೂರು ತಾಲ್ಲೂಕು | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಂಗಮ್ಮ**
ಪೀಠಾಧಿಕಾರಿ–2, ವಸತಿ ಇಲಾಖೆ

ಪಿಆರ್ – 649

**ಶಿಕ್ಷಣ ಸಚಿವಾಲಯ**

**ವಿಷಯ:** ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ: 5472–5478/97ರಲ್ಲಿ ದಿನಾಂಕ: 04.07.2002 ರಂದು ನೀಡಿದ ಆದೇಶದ ಅನುಷ್ಠಾನ ಶ್ರೀ ಎನ್. ಹನುಮಂತರೆಡ್ಡಿ ಮತ್ತು ಇತರರು ವಿರುದ್ಧ ರಾಜ್ಯ ಸರ್ಕಾರ ಮತ್ತು ಇತರರು – ನಿವೃತ್ತಿ ಉಪದಾನಗಳ ಸೌಲಭ್ಯದ ಮೊತ್ತಕ್ಕೆ ಶೇ.12 ರಷ್ಟು ಬಡ್ಡಿ ಪಾವತಿಸುವ ಬಗ್ಗೆ.

**ಓದಲಾಗಿದೆ:** 1. ಕೆ.ಎ.ಟಿ. ತೀರ್ಪು ಆದೇಶ ಸಂಖ್ಯೆ: 5472–5478/97 ದಿನಾಂಕ: 04.07.2002

2. ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ: 58–61/2006

3. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿ1(1)ದಾವೆ/03/97–98 ದಿನಾಂಕ:06.03.2007

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು, ಈ ಕೆಳಕಂಡಂತೆ ತೀರ್ಪು ನೀಡಿದೆ;

"The claim of the Applicants for re-working their pension and pensionary benefits on the basis of seniority ordered to be determined in Annexure-A4 as per clauses (i) to (iii) of para 17 and for re-fixation of their pay and monetary benefits in accordance with the Karnataka State Civil Services (Regulation of Promotion Pay and Pension) Act, 1973 would not be in conflict with any of the directions contained in Annexure-A4.

In the circumstances and to the extent indicated above, the Applications deserve to be and are allowed. The respondents are directed to comply with this order within a period of six months from the date of receipt of this order.

Any monetary benefits accuring to the Applicants in terms of the exercise as ordered shall be released to the Applicants within a period of six months from the date of receipt of this order.

In the event of non-compliance with the order within the stipulated time, the respondents shall be liable to pay interest of the arrears so worked out at the rate of 12% per annuam from the date of retirement till the date of payment. On payment of interest as aforesaid, the same shall be recovered from the erring officers/officials. This liability will be in addition to any other punishment for contempt".

2. ಮೇಲೆ ಓದಲಾದ ಕ್ರಮಾಂಕ (2)ರಲ್ಲಿ ಶ್ರೀ ಎನ್. ಹನುಮಂತರೆಡ್ಡಿ ಮತ್ತು ಇತರರು ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ: 58–61/2006 ನ್ನು ಸಲ್ಲಿಸಿದ್ದು, ಮಾನ್ಯ ನ್ಯಾಯಾಲಯವು ದಿನಾಂಕ: 09.03.2007 ರೊಳಗಾಗಿ ಅನುಸರಣಾ ವರದಿಯನ್ನು ನೀಡುವಂತೆ ನಿರ್ದೇಶನ ನೀಡಿರುತ್ತದೆ.

3. ಕ್ರಮಾಂಕ (3)ರಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಅರ್ಜಿದಾರರಿಗೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶದಂತೆ ನಿವೃತ್ತಿ ಉಪದಾನಗಳ ಮೇಲೆ ಬಡ್ಡಿ ಪಾವತಿ ಮಾಡಲು ಲೆಕ್ಕಾಚಾರ ಮಾಡಿ ಪ್ರಸ್ತಾಪಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಾಣಿಸಿದ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 588 ಡಿಪಿಐ 2002, ಬೆಂಗಳೂರು ದಿನಾಂಕ: 8ನೇ ಮಾರ್ಚ್, 2007**

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎನ್. ಹನುಮಂತರೆಡ್ಡಿ ಮತ್ತು ಇತರರುಗಳಿಗೆ ಬಿಡುಗಡೆಯಾಗಿರುವ ಪರಿಷ್ಕೃತ ನಿವೃತ್ತಿ ಸೌಲಭ್ಯಗಳ (ಪಿಂಚಣಿ ಮತ್ತು ಡಿ.ಸಿ.ಆರ್.ಜಿ) ವ್ಯತ್ಯಾಸದ ಮೊತ್ತಕ್ಕೆ ಅವರುಗಳು ವಯೋನಿವೃತ್ತರಾದ ದಿನಾಂಕದಿಂದ (1988 ರಿಂದ 1992 ರ ಅವಧಿ) ಪರಿಷ್ಕೃತ ಪಿಂಚಣಿ ಸೌಲಭ್ಯಗಳನ್ನು ಬಿಡುಗಡೆ ಮಾಡಿ ದಿನಾಂಕ: 31.01.2007 ರವರೆಗೆ ಪರಿಷ್ಕೃತ ಪಿಂಚಣಿ ಹಾಗೂ ಡಿ.ಸಿ.ಆರ್.ಜಿ. ಮೊತ್ತದ ಮೇಲೆ ಶೇ.12 ರಷ್ಟು ಬಡ್ಡಿಯನ್ನು ಈ ಕೆಳಕಾಣಿಸಿರುವಂತೆ ಲೆಕ್ಕ ಹಾಕಿದೆ.

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ ಶ್ರೀಯುತರುಗಳಾದ | ಪರಿಷ್ಕೃತ ಪಿಂಚಣಿ ಬಡ್ಡಿ (ಶೇ.12ರಂತೆ) | ಪರಿಷ್ಕೃತ ಡಿ.ಸಿ.ಆರ್.ಜಿ. ಮೇಲಿನ ಬಡ್ಡಿ (ಶೇ.12ರಂತೆ) | ಒಟ್ಟು ಪಾವತಿಸಬೇಕಾದ ಬಡ್ಡಿ |
|---|---|---|---|---|
| 1 | ಎನ್. ಹನುಮಂತರೆಡ್ಡಿ, ನಿವೃತ್ತ ಸಹಾಯಕ ಶಿಕ್ಷಣಾಧಿಕಾರಿಗಳು, ಬಳ್ಳಾರಿ | 44,850.00 | 15,090.00 | 59,940.00 |

| | | | | |
|---|---|---|---|---|
| 2 | ಜೆ. ಹನುಮಂತರಾವ್, ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಬಳ್ಳಾರಿ | 30,485.00 | 10,209.00 | 40,694.00 |
| 3 | ಕೆ.ಎಂ. ಶಂಭುಲಿಂಗಯ್ಯ, ನಿವೃತ್ತ ಶಿಕ್ಷಣಾಧಿಕಾರಿಗಳು, ಬಳ್ಳಾರಿ | 33,744.00 | 9,737.00 | 43,481.00 |
| 4 | ಜಿ. ಅಜ್ಜಪ್ಪ, ಮುಖ್ಯ ಶಿಕ್ಷಕರು, ವಿ.ಕೆ.ಕೆ. ಸರ್ಕಾರಿ ಪ್ರೌಢಶಾಲೆ, ಹಿರೇಹಡಗಲಿ, ಬಳ್ಳಾರಿ | 51,852.00 | 17,348.00 | 69,200.00 |
| 5 | ಹೆಚ್.ಕೆ. ಗುಂಡೂರಾವ್, ನಿವೃತ್ತ ಮುಖ್ಯ ಶಿಕ್ಷಕರು, ಹೆಮ್ಮಿಗನೂರು, ಬಳ್ಳಾರಿ | 21,732.00 | 8,935.00 | 30,667.00 |
| | | | | 2,43,982.00 |

ಪರಿಷ್ಕೃತ ಪಿಂಚಣಿ ಹಾಗೂ ಡಿ.ಸಿ.ಆರ್.ಜಿ. ಮೊತ್ತದ ಮೇಲಿನ ಬಡ್ಡಿಯನ್ನು ಮಹಾಲೇಖಪಾಲರು ನೀಡಿದ ಮಾಹಿತಿಯಂತೆ ತಯಾರಿಸಲಾಗಿದೆ.

ಅರ್ಜಿದಾರಲ್ಲೊಬ್ಬರಾದ ಶ್ರೀ ಕೆ. ಪತ್ರಪ್ಪ ಅವರ ಪರಿಷ್ಕೃತ ವೇತನ ನಿಗಧಿಗೆ ಸಂಬಂಧಿಸಿದಂತೆ ಈಗಾಗಲೇ ಇತ್ಯರ್ಥಪಡಿಸಿರುವ ಸೌಲಭ್ಯಗಳಲ್ಲಿ ಯಾವುದೇ ಬದಲಾವಣೆಗಳು ಇಲ್ಲವೆಂದು ಮಹಾಲೇಖಪಾಲರು ವರದಿ ಮಾಡಿರುವುದರಿಂದ ಇವರಿಗೆ ಯಾವುದೇ ವ್ಯತ್ಯಾಸದ ಹಣ ಸಿಗುವುದಿಲ್ಲವಾದ್ದರಿಂದ ಬಡ್ಡಿ ನೀಡುವ ಪ್ರಮೇಯ ಉದ್ಭವಿಸುವುದಿಲ್ಲ.

ಆದೇಶದಲ್ಲಿ ನಮೂದಿಸಿದ 5 ಜನ ಅರ್ಜಿದಾರರಿಗೆ ಅವರ ಪರಿಷ್ಕೃತ ನಿವೃತ್ತಿವೇತನ ಹಾಗೂ ಡಿ.ಸಿ.ಆರ್.ಜಿ. ಮೊತ್ತಕ್ಕೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ತೀರ್ಮಾನದಂತೆ ಶೇ.12ರ ಬಡ್ಡಿ ಲೆಕ್ಕಾಚಾರವನ್ನು ಮಹಾಲೇಖಪಾಲರು ಪ್ರಾಧಿಕರಿಸಿದ ಮೊತ್ತವನ್ನು ಆಧರಿಸಿ ಲೆಕ್ಕಾಚಾರ ಮಾಡಿರುವ ಬಗ್ಗೆ ಪುನಃ ದೃಢೀಕರಿಸಿಕೊಳ್ಳುವ ಷರತ್ತಿಗೊಳಪಟ್ಟು ಒಟ್ಟು ರೂ.2,43,982/– (ಎರಡು ಲಕ್ಷದ ನಲವತ್ತ ಮೂರು ಸಾವಿರದ ಒಂಬೈನೂರ ಎಂಬತ್ತ ಎರಡು ರೂಪಾಯಿಗಳು ಮಾತ್ರ)ಗಳನ್ನು ಪರಿಷ್ಕೃತ ಪಿಂಚಣಿ ಸೌಲಭ್ಯಗಳ ಮೇಲಿನ ಬಡ್ಡಿಯನ್ನಾಗಿ ಪಾವತಿ ಮಾಡಲು ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶಿಇ 242 ಐಎಫ್ಎಸ್ 2007 ದಿನಾಂಕ:08.03.2007ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸ್ವರ್ಣಲತಾ ಎಂ. ಭಂಡಾರೆ**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಸೇವೆಗಳು 1,2)

ಪಿ.ಆರ್. 427

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಹುಬ್ಬಳ್ಳಿಯ ಕಿಮ್ಸ್‌ನ ಸುವರ್ಣ ಮಹೋತ್ಸವ – 2007ರ ಆಚರಣೆ ಸಂಬಂಧ ಕಾರ್ಯಕಾರಿ ಸಮಿತಿ ರಚಿಸುವ ಕುರಿತು.

**ಓದಲಾಗಿದೆ:** ದಿನಾಂಕ 05.01.2007 ಸಂಖ್ಯೆ: ಕಿಮ್ಸ್/ನಿ.ಕಾ/194/2006–07ರ ಹುಬ್ಬಳ್ಳಿಯ ಕಿಮ್ಸ್‌ನ ನಿರ್ದೇಶಕರ ಪತ್ರ.

**ಪ್ರಸ್ತಾವನೆ:**

1) ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹುಬ್ಬಳ್ಳಿ ಇವರು ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರ ಅಧ್ಯಕ್ಷತೆಯಲ್ಲಿ ಸಂಸ್ಥೆಯ ಹಳೆ ವಿದ್ಯಾರ್ಥಿಗಳನ್ನೊಳಗೊಂಡಂತೆ ಸಂಸ್ಥೆಯ ಸುವರ್ಣ ಮಹೋತ್ಸವದ ಆಚರಣೆ ಸಂಬಂಧ ಸಭೆ ಸೇರಿ ಕಾರ್ಯಕಾರಿ ಸಮಿತಿ ರಚನೆ ಮಾಡಿಕೊಂಡಿದ್ದು, ಅದರಂತೆ ಕಾರ್ಯ ಪ್ರವೃತ್ತರಾಗಲು ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

2) ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯು ಕರ್ನಾಟಕ ವೈದ್ಯಕೀಯ ಕಾಲೇಜು ಎಂಬ ಹೆಸರಿನಲ್ಲಿ 1957ರಲ್ಲಿ ಸ್ಥಾಪನೆಗೊಂಡು ನಂತರ 1996ರಲ್ಲಿ ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಎಂಬ ಹೆಸರಿನಲ್ಲಿ ಸ್ವಾಯತ್ತ ಸ್ಥಾನಮಾನದೊಂದಿಗೆ ಕರ್ನಾಟಕದ ಉತ್ತರ ಭಾಗದ ಜನತೆಗೆ ಉತ್ತಮ ಸೇವೆ ನೀಡುತ್ತಾ ಬಂದಿರುತ್ತದೆ. ಹಾಲಿ ಈ ಸಂಸ್ಥೆಯು 50 ವರ್ಷಗಳನ್ನು ಪೂರೈಸುತ್ತಿದ್ದು "ಸೆಪ್ಟೆಂಬರ್ 2007 ರಿಂದ ಸೆಪ್ಟೆಂಬರ್ 2008" ರವರೆಗೆ ಸುವರ್ಣ ವರ್ಷವನ್ನಾಗಿ ಆಚರಿಸಲು ತೀರ್ಮಾನಿಸಿರುತ್ತದೆ. ಅದರಂತೆ ದಿನಾಂಕ 16.08.2006ರಂದು ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರ ಅಧ್ಯಕ್ಷತೆಯ ಸಭೆಯಲ್ಲಿ ತೀರ್ಮಾನಿಸಿದಂತೆ ಸುವರ್ಣ ಮಹೋತ್ಸವದ ಆಚರಣೆಗೆ ಕಾರ್ಯಕಾರಿ ಸಮಿತಿಯನ್ನು ರಚಿಸಿ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುವ ಹಿನ್ನಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 19 ಎಂಎಸ್‌ಎಫ್ 2007, ಬೆಂಗಳೂರು, ದಿನಾಂಕ: 5ನೇ ಏಪ್ರಿಲ್, 2007**

3) ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ಸುವರ್ಣ ಮಹೋತ್ಸವದ ಆಚರಣೆಗೆ ಈ ಕೆಳಕಂಡ ಕಾರ್ಯಕಾರಿ ಸಮಿತಿಯನ್ನು ರಚಿಸಲಾಗಿದೆ.

**(1) ಚೀಫ್ ಪ್ಯಾಟ್ರನ್ಸ್**

ಸನ್ಮಾನ್ಯ ಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ
ಸನ್ಮಾನ್ಯ ಉಪ ಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ

**(2) ಪ್ರಿನ್ಸಿಪಲ್ ಪ್ಯಾಟ್ರನ್**

ಸನ್ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು

**(3) ಪ್ಯಾಟ್ರನ್ಸ್**

ಸನ್ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು
ಸನ್ಮಾನ್ಯ ಕಂದಾಯ ಸಚಿವರು
ಸನ್ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು
ಸನ್ಮಾನ್ಯ ವಿರೋಧ ಪಕ್ಷದ ನಾಯಕರು, ಕರ್ನಾಟಕ ವಿಧಾನಸಭೆ
ಸನ್ಮಾನ್ಯ ವಿರೋಧ ಪಕ್ಷದ ನಾಯಕರು, ಕರ್ನಾಟಕ ವಿಧಾನ ಪರಿಷತ್ತು
ಸನ್ಮಾನ್ಯ ಲೋಕಸಭಾ ಸದಸ್ಯರು, ಧಾರವಾಡ
ಪೂಜ್ಯ ಮಹಾಪೌರರು, ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆ

**(4) ಗೌರವಾಧ್ಯಕ್ಷರು**

ನಾಡೋಜ ಡಾ: ಪಾಟೀಲ ಪುಟ್ಟಪ್ಪ, ಮಾಜಿ ಸಂಸದರು, ಹುಬ್ಬಳ್ಳಿ

**(5) ಗೌರವ ಉಪಾಧ್ಯಕ್ಷರುಗಳು**

(1) ಡಾ: ಸುಧಾ ಮೂರ್ತಿ, ಅಧ್ಯಕ್ಷರು, ಇನ್‌ಫೋಸಿಸ್ ಫೌಂಡೇಷನ್, ಬೆಂಗಳೂರು
(2) ಡಾ: ಜಿ.ಎಂ. ಪಾಟೀಲ, ಧರ್ಮದರ್ಶಿ, ಲೋಕ ಶಿಕ್ಷಣ ಟ್ರಸ್ಟ್, ಹುಬ್ಬಳ್ಳಿ
(3) ಶ್ರೀ ಶಂಕ್ರಣ್ಣ, ಮುನವಳ್ಳಿ, ಅಧ್ಯಕ್ಷರು, ಕರ್ನಾಟಕ ಚೇಂಬರ್ ಆಫ್ ಕಾಮರ್ಸ್ ಹಾಗೂ ಇಂಡಸ್ಟ್ರೀಸ್, ಹುಬ್ಬಳ್ಳಿ

**(6) ಅಡ್ವೈಸರಿ ಬೋರ್ಡ್ ಮೆಂಬರ್ಸ್**

(1) ಧಾರವಾಡ ಜಿಲ್ಲೆಯ ಮಾನ್ಯ ವಿಧಾನಸಭೆ, ವಿಧಾನಪರಿಷತ್ತು, ಲೋಕಸಭೆ ಮತ್ತು ರಾಜ್ಯಸಭೆಯ ಎಲ್ಲಾ ಸದಸ್ಯರು
(2) ಧಾರವಾಡ ಜಿಲ್ಲೆಯ ಮಾನ್ಯ ವಿಧಾನಸಭೆ, ವಿಧಾನಪರಿಷತ್ತು, ಲೋಕಸಭೆ ಮತ್ತು ರಾಜ್ಯಸಭೆಯ ಎಲ್ಲಾ ಮಾಜಿ ಸದಸ್ಯರು
(3) ಡಾ: ಎಂ.ಪಿ. ನಾಡಗೌಡ, ವಿಧಾನಪರಿಷತ್ತಿನ ಮಾನ್ಯ ಸದಸ್ಯರು, ಬೆಳಗಾಂ
(4) ಸರ್ಕಾರದ ಮುಖ್ಯ ಕಾರ್ಯದರ್ಶಿ, ಕರ್ನಾಟಕ ಸರ್ಕಾರ
(5) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ
(6) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(7) ಸರ್ಕಾರದ ಕಾರ್ಯದರ್ಶಿ, ವೈದ್ಯಕೀಯ ಶಿಕ್ಷಣ ಇಲಾಖೆ
(8) ಉಪ ಕುಲಪತಿಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

(9) ಉಪಕುಲಪತಿಗಳು, ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು

(10) ಕುಲಸಚಿವರು, ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು

(11) ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇಲಾಖೆ, ಬೆಂಗಳೂರು

(12) ನಿರ್ದೇಶಕರು, ನಿಮಾನ್ಸ್, ಬೆಂಗಳೂರು

(13) ನಿರ್ದೇಶಕರು, ಕಿದ್ವಾಯಿ ಸಂಸ್ಥೆ, ಬೆಂಗಳೂರು.

(14) ನಿರ್ದೇಶಕರು, ಶ್ರೀ ಜಯದೇವ ಹೃದ್ರೋಗ ಸಂಸ್ಥೆ, ಬೆಂಗಳೂರು.

(15) ಆಯುಕ್ತರು, ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ

(16) ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ, ಧಾರವಾಡ

(17) ಆಯುಕ್ತರು, ಪೊಲೀಸ್ ಇಲಾಖೆ, ಹುಬ್ಬಳ್ಳಿ-ಧಾರವಾಡ

(18) ಕರ್ನಾಟಕ ವೈದ್ಯಕೀಯ ಕಾಲೇಜು/ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ಎಲ್ಲಾ ಮಾಜಿ ನಿರ್ದೇಶಕರುಗಳು/ಪ್ರಾಂಶುಪಾಲರುಗಳು/ಅಧೀಕ್ಷಕರುಗಳು

(19) ಸಂಸ್ಥೆಯ ಎಲ್ಲಾ ಮಾಜಿ ಹಾಗೂ ಹಾಲಿ ಶಿಕ್ಷಕರು (ಗೌರವ ಶಿಕ್ಷಕರು ಒಳಗೊಂಡಂತೆ)

**(7) ಪ್ರೆಸಿಡೆಂಟ್**

ಡಾ: ಎ.ಬಿ. ಮಲಕರೆಡ್ಡಿ (ಅಲುಮ್ನಿ), ಮಾಜಿ ಆರೋಗ್ಯ ಮತ್ತು ವೈದ್ಯಕೀಯ ಶಿಕ್ಷಣ ಸಚಿವರು, ಕರ್ನಾಟಕ ಸರ್ಕಾರ

**(8) ವರ್ಕಿಂಗ್ ಪ್ರೆಸಿಡೆಂಟ್**

ಡಾ: ಕೆ.ಎಸ್. ಶೇಖರ್, ಬೆಂಗಳೂರು ಆಸ್ಪತ್ರೆ, ಬೆಂಗಳೂರು

**(9) ವೈಸ್ ಪ್ರೆಸಿಡೆಂಟ್**

(1) ಡಾ: ಚಂದ್ರಶೇಖರ್ ಶೆಟ್ಟಿ (ಅಲುಮ್ನಿ) ಮಾಜಿ ಉಪಕುಲಪತಿಗಳು, ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು

(2) ಡಾ: ಜಿ.ಆರ್. ತಮಗೊಂಡ, ಜಮಖಂಡಿ

(3) ಡಾ: ರವಿ ಕಲಘಟಗಿ, ಹುಬ್ಬಳ್ಳಿ

(4) ಡಾ: ಡಿ.ಜಿ. ಹಳ್ಳಿಕೇರಿ, ಹುಬ್ಬಳ್ಳಿ

(5) ಡಾ: ವಿ.ಡಿ. ಪಾಟೀಲ್, ಪ್ರಾಂಶುಪಾಲರು, ಜೆ.ಎನ್.ಎಂ.ಸಿ. ಬೆಳಗಾಂ

(6) ಡಾ: ಶಿರಿಯಣ್ಣನವರ (ಅಲುಮ್ನಿ), ಶಾಸಕರು, ನವಲಗುಂದ

(7) ಡಾ: ಐ.ಎಸ್. ಪಾಟೀಲ್, ಬೆಳಗಾಂ

**(10) ಚೇರಮನ್**

ನಿರ್ದೇಶಕರು, ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹುಬ್ಬಳ್ಳಿ

**(11) ವೈಸ್ ಚೇರಮನ್**

(1) ಡಾ: ಬಸವರಾಜ ಜವಳಿ, ಮಾಜಿ ಸಂಸದರು, ಗುಲ್ಬರ್ಗಾ

(2) ಡಾ: ಆರ್.ಬಿ. ಚೌದರು, ಮಾಜಿ ಸಚಿವರು, ಬಿಜಾಪುರ

(3) ಡಾ: ಬಿ.ಹೆಚ್. ಕೇರೂಡಿ, ಬಾಗಲಕೋಟೆ

(4) ಡಾ: ಸುಬ್ಬಾರಾವ್, ಬೆಂಗಳೂರು

(5) ಡಾ: ಎ.ಎಸ್. ಗೋಧಿ, ಬೆಳಗಾಂ

(6) ಡಾ: ಬಿ.ಎಲ್. ಪಾಟೀಲ್, ಹುಬ್ಬಳ್ಳಿ

(7) ಡಾ: ಬಿ.ಸಿ. ಉಪ್ಪಿನ್, ಬಿಜಾಪುರ

**(12) ಆರ್ಗನೈಸಿಂಗ್ ಸೆಕ್ರೇಟರಿಸ್**

(1) ಡಾ: ಜಿ.ಬಿ.ಸತ್ತೂರ್, ಹುಬ್ಬಳ್ಳಿ

(2) ಡಾ: ಕಲಮದನಿ, ಹುಬ್ಬಳ್ಳಿ

(3) ಡಾ: ಯು.ಎಸ್. ಹಂಗರಗ, ಹುಬ್ಬಳ್ಳಿ

(4) ಡಾ: ಎನ್.ಎಂ. ಮಹಾಬಲಶೆಟ್ಟಿ, ಹುಬ್ಬಳ್ಳಿ

(5) ಡಾ: ಅಬ್ದುಲ್ ಕರೀಮ್, ಹುಬ್ಬಳ್ಳಿ

(6) ಡಾ: ಸಂಜಯ್ ದಾಂಗೆ, ಹಾವೇರಿ

(7) ಡಾ: ಸುಭಾಷ್ ಬಬ್ರುವಾಡ್, ಹುಬ್ಬಳ್ಳಿ

(8) ಡಾ: ಎಸ್.ಹೆಚ್. ಪಾಟೀಲ್, ಧಾರವಾಡ

(9) ಪ್ರಾಂಶುಪಾಲರು, ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹುಬ್ಬಳ್ಳಿ

(10) ವೈದ್ಯಕೀಯ ಅಧೀಕ್ಷಕರು, ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹುಬ್ಬಳ್ಳಿ

(11) ವೈದ್ಯಕೀಯ ಅಧೀಕ್ಷಕರು, ಕರ್ನಾಟಕ ಮಾನಸಿಕ ಆರೋಗ್ಯ ಸಂಸ್ಥೆ, ಧಾರವಾಡ

**(13) ಜಾಯಿಂಟ್ ಆರ್ಗನೈಸಿಂಗ್ ಸೆಕ್ರೇಟರಿಸ್**

(1) ಡಾ: ಪಿ.ವಿ. ಕಂಚಿ, ಹುಬ್ಬಳ್ಳಿ

(2) ಡಾ: ಕೆ.ಎಂ.ಪಿ. ಸುರೇಶ್, ಹುಬ್ಬಳ್ಳಿ

(3) ಡಾ: ಗಜಾನನ ನಾಯಕ್, ಹುಬ್ಬಳ್ಳಿ

(4) ಡಾ: ಜಯಲಕ್ಷ್ಮಿ ಕಾಮತ್, ಹುಬ್ಬಳ್ಳಿ

(5) ಅಧ್ಯಕ್ಷರು, ಕಿರಿಯ ವೈದ್ಯರುಗಳ ಸಂಘ, ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹುಬ್ಬಳ್ಳಿ

(6) ಕಾರ್ಯದರ್ಶಿ, ವಿದ್ಯಾರ್ಥಿಗಳ ಸಂಘ, ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹುಬ್ಬಳ್ಳಿ

(7) ಅಧ್ಯಕ್ಷರು, ಕರ್ನಾಟಕ ವೈದ್ಯಕೀಯ ಕಾಲೇಜು ಶಿಕ್ಷಕರ ಸಂಘ, ಹುಬ್ಬಳ್ಳಿ

(8) ಅಧ್ಯಕ್ಷರು, ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಶಿಕ್ಷಕರ ಸಂಘ, ಹುಬ್ಬಳ್ಳಿ

(9) ಪ್ರಾಂಶುಪಾಲರು, ನರ್ಸಿಂಗ್ ಕಾಲೇಜು, ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹುಬ್ಬಳ್ಳಿ

(10) ಮಾಟ್ರನ್, ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹುಬ್ಬಳ್ಳಿ

(11) ಅಧ್ಯಕ್ಷರು, 'ಸಿ' ಹಾಗೂ 'ಡಿ' ವರ್ಗದ ಸಿಬ್ಬಂದಿ, ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹುಬ್ಬಳ್ಳಿ

(12) ಮುಖ್ಯ ಆಡಳಿತಾಧಿಕಾರಿ, ಆರ್ಥಿಕ ಸಲಹೆಗಾರರು, ಆವರಣ ಅಧಿಕಾರಿ, ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹುಬ್ಬಳ್ಳಿ

**(13) ಟ್ರೆಜರರ್**

ಡಾ: ವೈ.ಎನ್. ಕಬಾಡಿ

**(14) ಜಾಯಿಂಟ್ ಟ್ರೆಜರರ್**

ಡಾ: ಬಿ.ಎಸ್. ಮದಕಟ್ಟಿ

**(15) ಪಿ.ಆರ್.ಓ.**

ಡಾ: ಪ್ರಹ್ಲಾದ ಅಗಸನಗಟ್ಟಿ, ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹುಬ್ಬಳ್ಳಿ

**(16) ಮೆಂಬರ್ಸ್**

(1) ಡಾ: ಶ್ಯಾಮಸುಂದರ್ ಶೆಟ್ಟಿ, ದಾವಣಗೆರೆ

(2) ಡಾ: (ಶ್ರೀಮತಿ) ವಿಜಯಲಕ್ಷ್ಮಿ ಆರ್. ಬಾಳೆಕುಂದ್ರಿ, ಬೆಂಗಳೂರು

(3) ಡಾ: (ಶ್ರೀಮತಿ) ಉಮಾದೇವಿ ಶಂಕರ್ ಬಿದರಿ, ಬೆಂಗಳೂರು

(4) ಡಾ: (ಶ್ರೀಮತಿ) ಸುನಂದಾ ಕುಲಕರ್ಣಿ, ಬೆಂಗಳೂರು

(5) ಡಾ: ಸಿ.ವಿ. ಶಿರೋಳ್, ಬೆಂಗಳೂರು

(6) ಡಾ: ಸಿ.ಬಿ. ಪಾಟೀಲ್, ಬೆಂಗಳೂರು

(7) ಡಾ: ಬಿ.ಸಿ. ವಸ್ತ್ರದ್, ಪ್ರಾಂಶುಪಾಲರು, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು

(8) ಡಾ: ಎ.ಆರ್. ಪಾಟೀಲ್, ಪ್ರಾಂಶುಪಾಲರು, ಡಿ.ಆರ್.ಎಸ್.ಎಂ.ಸಿ., ಕೋಲಾರ

(9) ಡಾ: ಸುದರ್ಶನ್, ಪ್ರಾಂಶುಪಾಲರು, ಕಿಮ್ಸ್, ಬೆಂಗಳೂರು
(10) ಡಾ: ಎಸ್.ವಿ. ಸೊರಟೂರು, ಮೀರಜ್
(11) ಡಾ: ಕೆ. ಮಹದೇವ್, ಮೈಸೂರು
(12) ಡಾ: ವಿಷ್ಣುಮೂರ್ತಿ, ಮೈಸೂರು
(13) ಡಾ: ವಸಂತ ಕುಲಕರ್ಣಿ, ಬೆಂಗಳೂರು
(14) ಡಾ: ಪಾಂಡುರಂಗ ಪಾಟೀಲ್, ಮಾಜಿ ಮಹಾಪೌರರು, ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆ, ಹುಬ್ಬಳ್ಳಿ
(15) ಡಾ: ಬಿ.ಕೆ. ಗ್ರಾಮ ಪುರೋಹಿತ್, ಹುಬ್ಬಳ್ಳಿ
(16) ಡಾ: ಪಿಂಡಿ ಲಕ್ಷ್ಮಣಮೂರ್ತಿ, ಕಾಕಿನಾಡ, ಆಂಧ್ರ ಪ್ರದೇಶ
(17) ಡಾ: ಮಲ್ಲಿಕಾರ್ಜುನ ಭಂಡಾರಿ, ಪ್ರಾಂಶುಪಾಲರು, ಎಂ.ಆರ್.ಎಂ.ಸಿ. ಗುಲ್ಬರ್ಗಾ
(18) ಡಾ: ಮುಧೋಳ್, ಬೆಳಗಾಂ
(19) ಡಾ: ಕುಲಗೋಡ್, ರಾಮದುರ್ಗ
(20) ಡಾ: ಉಮೇಶ್ ಮೇಗೂರ್, ಬೀದರ್
(21) ಡಾ: ಬಸವರಾಜ್ ಮೋದಿ, ಗುಲ್ಬರ್ಗಾ
(22) ಡಾ: ವಿಶ್ವನಾಥ್ ಹಿರೇಮಠ, ಬೆಂಗಳೂರು
(23) ಡಾ: ಪಿ.ವಿ. ತಿಳ್ವೆ, ಮುಂಬಯಿ
(24) ಅಧ್ಯಕ್ಷರು, ಐ.ಎಂ.ಎ. ಸ್ಟೇಟ್ ಬ್ರ್ಯಾಂಚ್, ಬೆಂಗಳೂರು
(25) ಅಧ್ಯಕ್ಷರು, ಐ.ಎಂ.ಎ. ಹುಬ್ಬಳ್ಳಿ
(26) ಅಧ್ಯಕ್ಷರು, ಐ.ಎಂ.ಎ. ಕೆ.ಎಂ.ಸಿ. ಬ್ರ್ಯಾಂಚ್, ಹುಬ್ಬಳ್ಳಿ
(27) ಅಧ್ಯಕ್ಷರು, ಐ.ಎಂ.ಎ ಧಾರವಾಡ

**(18) ಓವರ್‌ಸೀಸ್ ಮೆಂಬರ್ಸ್**

**ಯು.ಎಸ್.ಎ**

(1) ಡಾ: ಚಂದ್ರಪ್ಪ ರೇಶ್ಮಿ
(2) ಡಾ: ಶಿವಣಗಿ
(3) ಡಾ: ಭಗವಾನ್
(4) ಡಾ: ಉದೋಶಿ ಎಂ.ಬಿ.
(5) ಡಾ: ನಡಾಫ್ ಕೆ.
(6) ಡಾ: (ಶ್ರೀಮತಿ) ಬೆಂಡಿಗೇರಿ ವಿಜಯ
(7) ಡಾ: (ಶ್ರೀಮತಿ) ವಿಜಯ ಮಹಿಷಿ
(8) ಡಾ: ಪ್ರಕಾಶ್ ಮಹಾಲಿಂಗಶೆಟ್ಟಿ

**ಯು.ಕೆ.**

(1) ಡಾ: ಮುಲ್ಲಾ
(2) ಡಾ: ಸಿ.ಎಲ್. ಬಿಳಗಿ
(3) ಡಾ: ಸಿ.ಸಿ. ಕುರುವಟ್ಟಿ
(4) ಡಾ: ಕಟ್ಟಿ
(5) ಡಾ: ಸುರೇಶ್ ಸಾಣಿಕೊಪ್ಪ

**ಕುವೈತ್**

(1) ಡಾ: ವಿವೇಕ್ ವಾಣಿ

ಸದರಿ ಸಮಿತಿಯು ಸುವರ್ಣ ಮಹೋತ್ಸವದ ಆಚರಣೆ ಸಂಬಂಧ ಕಾರ್ಯಪ್ರವೃತ್ತರಾಗತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ವೆಂಕಟೇಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

ಪಿ.ಆರ್. 632

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎಂ. ನರಸಪ್ಪ ಸರ್ಕಾರಿ ಅಭಿಯೋಜಕರು, ಹಾಸನ ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ:** 1. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್:ಕೇಂಸ/ಬಿ–63/2000–01 ದಿನಾಂಕ: 19.12.01

2. ಕಾರಣ ಕೇಳುವ ತಿಳುವಳಿಕೆ ಪತ್ರ ಸಂ:ಲಾ: 95 ಪಿಪಿಇ 2001 ದಿನಾಂಕ: 1.6.04

3. ಅಧಿಕಾರಿಯ ಸಮಜಾಯಿಷಿ ಪತ್ರ ದಿನಾಂಕ 25.6.04

4. ಸರ್ಕಾರಿ ಆದೇಶ ಸಂ: ಒಇ 69 ಪಿಪಿಇ 2005, ದಿನಾಂಕ 17.11.2005

5. ಸರ್ಕಾರಿ ಆದೇಶ ಸಂ: ಒಇ 69 ಪಿಪಿಇ 2005, ದಿನಾಂಕ: 27.1.2006

6. ವಿಚಾರಣಾಧಿಕಾರಿಯವರ ವಿಚಾರಣಾ ವರದಿ ದಿನಾಂಕ: 12.10.2006

7. 2ನೇ ಕಾರಣ ಕೇಳುವ ತಿಳುವಳಿಕೆ ಪತ್ರ ಸಂ: ಒಇ 69 ಪಿಪಿಇ 2005 ದಿನಾಂಕ: 8.11.06

8. ಆರೋಪಿತ ಅಧಿಕಾರಿಯ ಸಮಜಾಯಿಷಿ ಪತ್ರ ದಿನಾಂಕ: 07.12.2006

**ಪ್ರಸ್ತಾವನೆ:**

ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಹಾಸನ ಇವರು ಚಿಕ್ಕಮಗಳೂರಿನ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ಅಧಿಕ ಸರ್ಕಾರಿ ಅಭಿಯೋಜಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಚಿಕ್ಕಮಗಳೂರು ಆರಕ್ಷಕ ಠಾಣೆ ಗುನ್ನೆ ಸಂ: 188/2000ರಲ್ಲಿ ಆರೋಪಿಯಾದ ಜಿ. ಸುರೇಶ್ ಇವರು ಕ್ರಿಮಿನಲ್ ಮಿಸ್ 120/2000ರಲ್ಲಿ ನಿರೀಕ್ಷಣಾ ಜಾಮೀನಿಗೆ ಅರ್ಜಿ ಸಲ್ಲಿಸಿದ್ದು ಜಾಮೀನು ದೊರಕಿಸಿಕೊಡಲು ರೂ.10,000/– ಕೊಡಬೇಕೆಂದು ಒತ್ತಾಯಿಸಿ ರೂ.5,000/– ಗಳನ್ನು ಪಡೆದಿರುತ್ತಾರೆ. ಪ್ರಕರಣದ ದೋಷಾರೋಪಣ ಪಟ್ಟಿಯನ್ನು ಸಂಬಂಧಪಟ್ಟ ತನಿಖಾಧಿಕಾರಿಯಿಂದ ದಿನಾಂಕ 1.12.2000ರಂದು ಸ್ವೀಕರಿಸಿದ್ದು ದಿನಾಂಕ 2.2.01ರ ವರೆಗೆ ತಮ್ಮ ಬಳಿಯೇ ಇಟ್ಟುಕೊಂಡಿರುತ್ತಾರೆ. ಅಲ್ಲದೇ ಸದರಿ ದೋಷಾರೋಪಣ ಪಟ್ಟಿಯನ್ನು ಯಥಾಸ್ಥಿತಿಯಲ್ಲಿ ನ್ಯಾಯಾಲಯಕ್ಕೆ ಸಲ್ಲಿಸಲು ರೂ.5,000/–ಗಳ ಲಂಚಕ್ಕಾಗಿ ಒತ್ತಾಯಪಡಿಸಿ ತಮ್ಮ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸದೇ ಸರ್ಕಾರಿ ನೌಕರರಿಗೆ ಶೋಭಿಸದ ರೀತಿಯಲ್ಲಿ ನಡೆದುಕೊಂಡು ದುರ್ನಡತೆ ಎಸಗಿ ಸರ್ಕಾರಿ ಸೇವಾ (ನಡತೆ) ನಿಯಮಗಳು 1966ರ ನಿಯಮ 3(ii) ಮತ್ತು 3(iii)ನ್ನು ಉಲ್ಲಂಘಿಸಿರುವುದರಿಂದ ಇವರ ವಿರುದ್ಧ ಕ್ರಮ ಜರುಗಿಸುವಂತೆ ಮೇಲೆ (1)ರಲ್ಲಿ ಓದಲಾಗಿರುವ ಪತ್ರದಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ಸರ್ಕಾರವನ್ನು ಕೋರಿದ್ದರು.

ಶ್ರೀ ಎಂ.ನರಸಪ್ಪ, ಸರ್ಕಾರಿ ಅಭಿಯೋಜಕರು ಇವರಿಗೆ ಕಾರಣ ಕೇಳುವ ತಿಳುವಳಿಕೆ ಪತ್ರದೊಂದಿಗೆ ದೋಷಾರೋಪಣ ಪಟ್ಟಿ ಅನುಬಂಧ–1 ಮತ್ತು 4ನ್ನು ಜಾರಿಮಾಡಿ ತಮ್ಮ ಮೇಲಿನ ಆಪಾದನೆಗಳನ್ನು ಒಪ್ಪಿಕೊಳ್ಳುವ ಅಥವಾ ನಿರಾಕರಿಸುವ ಬಗ್ಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಮೇಲೆ (2)ರಲ್ಲಿ ಓದಲಾಗಿರುವ ದಿನಾಂಕ: 1.6.04ರ ಕಾರಣ ಕೇಳುವ ತಿಳುವಳಿಕೆ ಪತ್ರದಲ್ಲಿ ತಿಳಿಸಲಾಗಿದ್ದಿತು.

ಆರೋಪಿತ ಅಧಿಕಾರಿಯು ಲಿಖಿತ ಹೇಳಿಕೆಯನ್ನು ಸಲ್ಲಿಸಿ ತಮ್ಮ ಮೇಲೆ ಮಾಡಿರುವ ಎಲ್ಲ ಆಪಾದನೆಗಳನ್ನು ಅಲ್ಲಗಳೆದು, ತಮ್ಮ ವಿವರಣೆಯನ್ನು ಒಪ್ಪಿಕೊಂಡು ಉದ್ದೇಶಿತ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಮೇಲೆ (3)ರಲ್ಲಿ ಓದಲಾಗಿರುವ 25.6.04ರ ಪತ್ರದಲ್ಲಿ ಕೋರಿರುತ್ತಾರೆ.

ಆದರೆ ಆರೋಪಿತ ಅಧಿಕಾರಿಯ ವಿವರಣೆ ಸಮಂಜಸವಾಗಿಲ್ಲದೇ ಇದ್ದುದರಿಂದ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ಮೇಲೆ (4)ರಲ್ಲಿ ಓದಲಾಗಿರುವ 17.11.2005ರಲ್ಲಿ ಇಲಾಖಾ ವಿಚಾರಣಾಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸಲಾಗಿದೆ. ಕಾರಣಾಂತರಗಳಿಂದ ಮಂಡನಾಧಿಕಾರಿಯವರನ್ನು ಬದಲಾಯಿಸಿ ಮೇಲೆ (5)ರಲ್ಲಿ ಓದಲಾಗಿರುವ 27.1.2006ರಲ್ಲಿ ಬೇರೆ ಇಲಾಖಾ ಮಂಡನಾಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸಲಾಗಿದೆ.

ವಿಚಾರಣಾಧಿಕಾರಿಯವರು ಮೇಲೆ (6)ರಲ್ಲಿ ಓದಲಾಗಿರುವ ಪತ್ರದೊಡನೆ ಇಲಾಖಾ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವರದಿಯಲ್ಲಿ ವಿಚಾರಣಾಧಿಕಾರಿಯವರು ಆಪಾಧಿತ ಸರ್ಕಾರಿ ಅಧಿಕಾರಿಯು ದೋಷಾರೋಪಣ ಪಟ್ಟಿಯನ್ನು ಏಳು ದಿನಗಳಿಗಿಂತ ಹೆಚ್ಚು ಅಂದರೆ ಒಂದು ತಿಂಗಳು ಇಟ್ಟುಕೊಂಡಿರುವುದು ಕಂಡುಬರುತ್ತದೆ. ಈ ಬಗ್ಗೆ ಸುತ್ತೋಲೆ ಪಿ18 ಸ್ಪಷ್ಟಪಡಿಸುತ್ತದೆ. ಸುತ್ತೋಲೆ ಕಾನೂನಿನ ನಿಯಮವಲ್ಲವಾದರೂ ಇಲಾಖಾ ಮುಖ್ಯಸ್ಥರು ತಮ್ಮ ಸಕ್ಷಮ ಅಧಿಕಾರ ಚಲಾಯಿಸಿ ಹೊರಡಿಸಿದ ಸುತ್ತೋಲೆಯನ್ನು ಪಾಲಿಸುವುದು ಸಂಬಂಧಿಸಿದವರ ಕರ್ತವ್ಯ. ಅಂಥ ಕರ್ತವ್ಯಚ್ಯುತಿ

ಇಲ್ಲಿ ನಡೆದಿದೆ. 5ನೇ ಸಾಕ್ಷೀದಾರರ ಪಾಟೀ ಸವಾಲಿನಲ್ಲಿನ ಉತ್ತರಗಳು ಆಪಾಧಿತರು ತನಿಖೆಯಲ್ಲಿ ಯಾವುದೇ ರೀತಿಯ ಹಸ್ತಕ್ಷೇಪ ಮಾಡಿಲ್ಲ. ಮಾಡಲು ಪ್ರಯತ್ನಿಸಿಲ್ಲ ಅನ್ನುವುದನ್ನು ಸ್ಪಷ್ಟಪಡಿಸುತ್ತವೆ. ಕಾರಣ ಹೆಚ್ಚಿನ ಚರ್ಚೆ ಮಾಡದೇ ದೋಷಾರೋಪಣ ಪಟ್ಟಿಯನ್ನು ಗೊತ್ತುಪಡಿಸಿದ ಅವಧಿಗಿಂತ ಹೆಚ್ಚಿನ ಅವಧಿಗೆ ತಮ್ಮ ವಶದಲ್ಲಿ ಇಟ್ಟುಕೊಂಡು ಪಿ18 ಸುತ್ತೋಲೆಯನ್ನು ಉಲ್ಲಂಘಿಸಿ ಕರ್ತವ್ಯಚ್ಯುತಿ ಎಸಗಿರುವುದನ್ನು ರುಜುವಾತುಪಡಿಸಲಾಗಿದೆ ಎಂದು ನಿರ್ಣಯಿಸಿ ಅಷ್ಟಕ್ಕೆ ಸಂಬಂಧಿಸಿದಂತೆ ಮಾತ್ರ ಈ ಅಂಶವನ್ನು ಹೌದು ಎಂದು ಉತ್ತರಿಸುತ್ತೇನೆ. ಮೇಲೆ ಹೇಳಿದ ಕಾರಣಗಳಿಂದಾಗಿ ಅಂಶ (1)ನ್ನು ಇಲ್ಲಾ ಎಂದು ಅಂಶ 2ನ್ನು ಹೌದು ಎಂದು ನಿಷ್ಕರ್ಷೆ ನೀಡಿರುತ್ತಾರೆ.

ಮೇಲೆ (7)ರಲ್ಲಿ ಓದಲಾಗಿರುವ 8.11.2006ರ 2ನೇ ಕಾರಣ ಕೇಳುವ ತಿಳುವಳಿಕೆ ಪತ್ರದೊಂದಿಗೆ ಇಲಾಖಾ ವಿಚಾರಣಾ ವರದಿಯ ಪ್ರತಿಯನ್ನು ಆರೋಪಿತ ಸರ್ಕಾರಿ ಅಧಿಕಾರಿಗೆ ಒದಗಿಸಿ ಅವರ ಹೇಳಿಕೆಯನ್ನು ನೀಡಲು 30 ದಿನಗಳ ಕಾಲಾವಕಾಶವನ್ನು ನೀಡಲಾಗಿತ್ತು.

ಆರೋಪಿತ ಸರ್ಕಾರಿ ಅಧಿಕಾರಿಯು ಮೇಲೆ (8)ರಲ್ಲಿ ಓದಲಾಗಿರುವ ದಿನಾಂಕ 07.12.2006 ರಂದು ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸಿ ತಮ್ಮ ಮೇಲೆ ಮಾಡಿರುವ ಆಪಾದನೆಗಳನ್ನು ಮತ್ತೊಮ್ಮೆ ನಿರಾಕರಿಸಿರುತ್ತಾರೆ. ತಮ್ಮಿಂದ ಯಾವುದೇ ರೀತಿಯ ವಿಳಂಬ ಅಥವಾ ತಪ್ಪಾಗಿಲ್ಲವೆಂದು ತಿಳಿಸಿರುತ್ತಾರೆ. ತಾವು ಯಾವುದೇ ನಿರ್ಲಕ್ಷತೆ ಅಥವಾ ದುರ್ನಡತೆಯನ್ನು ಎಸಗಿರುವುದಿಲ್ಲ. ಆದ್ದರಿಂದ ಈ ಸಮಜಾಯಿಷಿಯನ್ನು ಸೂಕ್ತ ಹಾಗೂ ಸಮಂಜಸವೆಂದು ಪರಿಗಣಿಸಿ ಮುಂದಿನ ಕ್ರಮವನ್ನು ಕೈಬಿಟ್ಟು ಕಡತವನ್ನು ಮುಕ್ತಾಯಗೊಳಿಸಬೇಕೆಂದು ಕೋರಿರುತ್ತಾರೆ.

ಆರೋಪಿತ ಅಧಿಕಾರಿಯು ನೀಡಿರುವ ಹೇಳಿಕೆಯು ಸಮಂಜಸವಾಗಿಲ್ಲವಾದ್ದರಿಂದ ಸದರಿ ಆರೋಪಿತ ಸರ್ಕಾರಿ ಅಧಿಕಾರಿಯ ಮೇಲೆ ಕರ್ನಾಟಕ ಸರ್ಕಾರ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii)ರ ಅಡಿಯಲ್ಲಿ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿ ಸಂಚಿತ ಪರಿಣಾಮರಹಿತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸುವ ಬಗ್ಗೆ ನೇಮಕಾತಿ ಪ್ರಾಧಿಕಾರಿ ಮತ್ತು ಶಿಸ್ತಿನ ಪ್ರಾಧಿಕಾರಿಯು ನಿರ್ಣಯಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಒಇ 69 ಪಿಪಿಇ 2005, ಬೆಂಗಳೂರು ದಿನಾಂಕ 5ನೇ ಏಪ್ರಿಲ್, 2007**

ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾಸನ ಇವರ ವಿರುದ್ಧ ಪ್ರಸ್ತಾವನೆಯಲ್ಲಿ ಮಾಡಲಾಗಿರುವ ಆಪಾದನೆಗಳು ಸಾಬೀತಾಗಿರುವುದರಿಂದ ಇವರ ವಿರುದ್ಧ ಕರ್ನಾಟಕ ಸರ್ಕಾರ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii) ರಲ್ಲಿ ನಮೂದಿಸಿರುವ ದಂಡನೆಯನ್ನು ವಿಧಿಸಿ ಸದರಿ ಅಧಿಕಾರಿಯ ದಿನಾಂಕ: 18.4.2007ರಂದು ಸಂಭವಿಸುವ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮರಹಿತವಾಗಿ ಒಂದು ವರ್ಷದವರೆಗೆ ತಡೆಹಿಡಿಯಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನಿಸಾರ್ ಅಹಮದ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 609 ಒಳಾಡಳಿತ ಇಲಾಖೆ (ಕಾ. ಮತ್ತು ಸು ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಅರುಣ್ ಗೋಡಬೋಲೆ, ಡಿವೈ.ಎಸ್.ಪಿ. ಮತ್ತು ಶ್ರೀ ಬಸವರಾಜು ಎಪಿಸಿ 156 ರವರುಗಳ ವಿರುದ್ಧ ಇಲಾಖಾ ಶಿಸ್ತಿನ ಕ್ರಮ ಜರುಗಿಸುವ ಕುರಿತು.

**ಓದಲಾಗಿದೆ:** ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಸಿಬಿ (5)40/2005-06 ದಿನಾಂಕ: 16.8.2006

**ಪ್ರಸ್ತಾವನೆ:**

ಶ್ರೀ ಅರುಣ್ ಗೋಡಬೋಲೆ, ಡಿವೈ.ಎಸ್.ಪಿ, ಕೊಪ್ಪಳ ಉಪ ವಿಭಾಗ ಮತ್ತು ಶ್ರೀ ಬಸವರಾಜ್ ಎಪಿಸಿ 156, ಡಿ.ಎ.ಆರ್. ಕೊಪ್ಪಳ, ರವರುಗಳು ದಿನಾಂಕ: 7.3.2005ರಂದು ಲಾರಿ ಚಾಲಕರುಗಳಿಂದ ಹಣ ವಸೂಲಿ ಮಾಡುವ ಉದ್ದೇಶದಿಂದ ಲಾರಿಯ ಮತ್ತು ಲಾರಿಯಲ್ಲಿದ್ದ ಲೋಡ್‌ಗೆ ಸಂಬಂಧಪಟ್ಟ ದಾಖಲೆಗಳನ್ನು ಕಸಿದುಕೊಂಡು ಮಾನಸಿಕ ಹಿಂಸೆ ನೀಡುತ್ತಿದ್ದರಿಂದ ಈ ಕೆಳಕಂಡ ದೋಷಾರೋಪಣೆಗಳನ್ನು ಈ ಪೊಲೀಸ್ ಅಧಿಕಾರಿ/ಸಿಬ್ಬಂದಿ ಇವರುಗಳ ವಿರುದ್ಧ ಆರೋಪಿಸಲಾಗಿದೆ.

**ದೋಷಾರೋಪಣೆ:**

ಶ್ರೀ ಅರುಣ್ ಗೋಡಬೋಲೆ, ಡಿಎಸ್‌ಪಿ, ಕೊಪ್ಪಳ ವಿಭಾಗ

1. ನೀವು ದಿನಾಂಕ: 7.3.2005 ರಂದು, ನಿಮ್ಮ ಜೀಪಿನಲ್ಲಿ ರಾತ್ರಿ 11 ಗಂಟೆಯ ಸುಮಾರಿಗೆ ಶ್ರೀ ಬಸವರಾಜ್, ಎಪಿಸಿ–156, ಶ್ರೀ ಬಸವರಾಜ, ಎಪಿಸಿ–71 ಮತ್ತು ಶ್ರೀ ಕಳಕಪ್ಪ, ಎಪಿಸಿ–177, ಡಿಎಆರ್, ಕೊಪ್ಪಳ ರವರುಗಳನ್ನು ಕರೆದುಕೊಂಡು ಹೋಗಿ, ರಸ್ತೆಯಲ್ಲಿ ಹೊರಟ್ಟಿದ್ದ ಲಾರಿ ಚಾಲಕರಿಂದ ಹಣ ವಸೂಲಿ ಮಾಡುವ ಉದ್ದೇಶದಿಂದ ಲಾರಿಯ ಮತ್ತು ಲಾರಿಯಲ್ಲಿದ್ದ ಲೋಡ್‌ಗೆ ಸಂಬಂಧಪಟ್ಟ ದಾಖಲಾತಿಗಳನ್ನು ಚಾಲಕರಿಗೆ ಜೋರು ಮಾಡಿ, ಕಸಿದುಕೊಂಡು, ಚಾಲಕರಿಗೆ ಹಲ್ಲೆ ಮಾಡಿ, ಮಾನಸಿಕ ಹಿಂಸೆ ನೀಡಿ, 4 ಲಾರಿಗಳನ್ನು ಅನಾವಶ್ಯಕವಾಗಿ ದಿನಾಂಕ: 7.3.2005ರ ರಾತ್ರಿ 11.30ರಿಂದ ದಿನಾಂಕ: 8.3.2005ರ ರಾತ್ರಿ 10 ಗಂಟೆಯವರೆಗೆ ದಡೆಗಲ್ ಡಾಬಾದ ಬಳಿ ನಿಲ್ಲಿ, ದಿನಾಂಕ: 8.3.2005ರ ಬೆಳಿಗ್ಗೆ ಅವರುಗಳನ್ನು ಎಸ್.ಪಿ. ಆಫೀಸ್ ಎದುರುಗಡೆ ಇರುವ ಮೆಡಿಕಲ್ ಶಾಪ್ ಬರಲು ಹೇಳಿ, ಅವರುಗಳು ಬಂದಾಗ ಅವರುಗಳಿಗೆ ರೂ.2,000/– ಗಳನ್ನು ಕೊಟ್ಟರೆ ಮಾತ್ರ ದಾಖಲಾತಿಗಳನ್ನು ಕೊಡುತ್ತೇವೆ ಅಂತ ಪೀಡಿಸಿ, ಅವರ ವಿರುದ್ಧ ಯಾವುದೇ ಪ್ರಕರಣಗಳನ್ನು ದಾಖಲಿಸದೆ ವಿಳಂಬವಾಗಿ ದಿನಾಂಕ: 8.3.2005 ರಂದು ರಾತ್ರಿ 10.00 ಗಂಟೆಗೆ ಪ್ರಕರಣಗಳನ್ನು ದಾಖಲಿಸಿ, ಕರ್ತವ್ಯದಲ್ಲಿ ಕರ್ತವ್ಯಚ್ಯುತಿ ದುರ್ನಡತೆ ಮತ್ತು ಅಧಿಕಾರ ದುರುಪಯೋಗ ಮಾಡಿಕೊಂಡಿರುತ್ತೀರಿ.

2. ಕೊಪ್ಪಳ ನಗರ ಠಾಣೆ ಗುನ್ನೆ ಸಂಖ್ಯೆ: 70/05 ಕಲಂ 323, 324, 504, 384, 427 ಐಪಿಸಿ ಪ್ರಕರಣದಲ್ಲಿ ಆರೋಪಿಯಾದ ಶ್ರೀ ಬಸವರಾಜ್, ಎಪಿಸಿ 156, ಡಿಎಆರ್, ಕೊಪ್ಪಳ ಇವರನ್ನು ವಿಚಾರಣೆಗಾಗಿ ದಿನಾಂಕ: 17.4.2005ರಂದು ರಾತ್ರಿ ತರೆಬಂದಾಗ ರಾತ್ರಿ 10.45 ಗಂಟೆಯ ಸುಮಾರಿಗೆ ನೀವು ಎಪಿಸಿ 156 ರವರ ಮೊಬೈಲ್‌ಗೆ ಕರೆ ಮಾಡಿ, ಸದರಿ ಎಪಿಸಿ 156 ಇವರನ್ನು ಠಾಣೆಯಲ್ಲಿ ನೋಡಿಕೊಳ್ಳುವ ಮೇಲ್ವಿಚಾರಣೆಯಲ್ಲಿದ್ದ ಸಿಪಿಸಿ 267, ಪರಶುರಾಮ್ ಇವರಿಗೆ ಮೊಬೈಲ್‌ನಲ್ಲಿ ಮಾತನಾಡಿ, ಅವರನ್ನು ನಿಮ್ಮ ಮನೆಗೆ ಬರಲು ತಿಳಿಸಿ, ನಂತರ ಪದೇ ಪದೇ ಎಪಿಸಿ 156 ರವರ ಮೊಬೈಲ್‌ಗೆ ಕರೆ ಮಾಡಿ, ಎಪಿಸಿ 156 ರವರು ಠಾಣೆಯಿಂದ ತಪ್ಪಿಸಿಕೊಳ್ಳಲು ಪ್ರಚೋದನೆ ನೀಡಿ, ಅಧಿಕಾರ ದುರುಪಯೋಗ ಪಡಿಸಿಕೊಂಡಿರುತ್ತೀರಿ.

**ಶ್ರೀ ಬಸವರಾಜ್, ಎಪಿಸಿ 156, ಡಿಎಆರ್, ಕೊಪ್ಪಳ**

1. ನೀವು ಶ್ರೀ ಅರುಣ್ ಗೋಡಬೋಲೆ, ಡಿವೈ.ಎಸ್.ಪಿ, ಕೊಪ್ಪಳ ವಿಭಾಗ ರವರ ಜೊತೆಗೂಡಿ ದಿನಾಂಕ: 7.3.2005ರಂದು, ಡಿಎಸ್‌ಪಿ ರವರ ಜೀಪಿನಲ್ಲಿ ರಾತ್ರಿ 11 ಗಂಟೆಯ ಸುಮಾರಿಗೆ ರಸ್ತೆಯಲ್ಲಿ ಹೊರಟ್ಟಿದ್ದ ಲಾರಿ ಚಾಲಕರಿಂದ ಹಣ ವಸೂಲಿ ಮಾಡುವ ಉದ್ದೇಶದಿಂದ ಲಾರಿಯ ಮತ್ತು ಲಾರಿಯಲ್ಲಿದ್ದ ಲೋಡ್‌ಗೆ ಸಂಬಂಧಪಟ್ಟ ದಾಖಲಾತಿಗಳನ್ನು ಜೋರು ಮಾಡಿ, ಅವರಿಂದ ಕಸಿದುಕೊಂಡು, ಹಲ್ಲೆ ಮಾಡಿ, ಮಾನಸಿಕ ಹಿಂಸೆ ನೀಡಿ, 4 ಲಾರಿಗಳನ್ನು ಅನಾವಶ್ಯಕವಾಗಿ ದಿನಾಂಕ: 7.3.2005ರ ರಾತ್ರಿ 11.30 ರಿಂದ ದಿನಾಂಕ: 8.3.2005ರ ರಾತ್ರಿ 10 ಗಂಟೆಯವರೆಗೆ ದಡೆಗಲ್ ಡಾಬಾದ ಬಳಿ ನಿಲ್ಲಿಸಿ ದಿನಾಂಕ: 8.3.2005ರ ಬೆಳಿಗ್ಗೆ ಅವರುಗಳನ್ನು ಎಸ್‌ಪಿ, ಆಫೀಸ್ ಎದುರುಗಡೆ ಇರುವ ಮೆಡಿಕಲ್ ಶಾಪ್ ಬರಲು ಹೇಳಿ, ಅವರುಗಳು ಬಂದಾಗ ಅವರುಗಳಿಗೆ ರೂ.2,000/– ಗಳನ್ನು ಕೊಟ್ಟರೆ ಮಾತ್ರ ದಾಖಲಾತಿಗಳನ್ನು ಕೊಡುತ್ತೇವೆ ಎಂದು ಪೀಡಿಸಿ, ಕರ್ತವ್ಯಚ್ಯುತಿ, ದುರ್ನಡತೆ ಹಾಗೂ ಅಧಿಕಾರ ದುರುಪಯೋಗ ಪಡಿಸಿಕೊಂಡಿರುತ್ತೀರಿ.

2. ನೀವು, ಕೊಪ್ಪಳ ನಗರ ಠಾಣೆ ಗುನ್ನೆ ಸಂಖ್ಯೆ: 70/50 ಕಲಂ 323, 324, 504, 384, 427 ಐಪಿಸಿ ಪ್ರಕರಣದಲ್ಲಿ ಆರೋಪಿಯಾಗಿದ್ದು, ನಿಮ್ಮನ್ನು ವಿಚಾರಣೆಗಾಗಿ ದಿನಾಂಕ: 17.4.2005ರಂದು ರಾತ್ರಿ ಕರೆತಂದಾಗ ರಾತ್ರಿ 10.45 ಗಂಟೆಯ ಸುಮಾರಿಗೆ ನೀವು ಪದೇ ಪದೇ ಶ್ರೀ ಅರುಣ್ ಗೋಡಬೋಲೆ, ಡಿಎಸ್‌ಪಿ ರವರೊಂದಿಗೆ ಮೊಬೈಲ್‌ನಲ್ಲಿ ಮಾತನಾಡಿ, ಶ್ರೀ ಪರಶುರಾಮ್, ಸಿಪಿಸಿ 267 ರವರ ಸುಪರ್ದಿನಿಂದ ತಪ್ಪಿಸಿಕೊಂಡು, ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ, ಕರ್ತವ್ಯಚ್ಯುತಿ ಹಾಗೂ ದುರ್ನಡತೆ ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ದೋಷಾರೋಪಣೆಗಳ ಹಿನ್ನೆಲೆಯಲ್ಲಿ ಶ್ರೀ ಅರುಣ್ ಗೋಡಬೋಲೆ ಡಿವೈ.ಎಸ್.ಪಿ. ಕೊಪ್ಪಳ ಉಪವಿಭಾಗ ಮತ್ತು ಶ್ರೀ ಬಸವರಾಜ್ ಎಪಿಸಿ 156, ಡಿಎಆರ್ ಕೊಪ್ಪಳ ಇವರ ವಿರುದ್ಧ ಕೆಎಸ್‌ಪಿ (ಡಿಪಿ) ನಿಯಮಗಳು 1965/89ರ ನಿಯಮ 6 ಮತ್ತು 8ರ ಪ್ರಕಾರ ಇಲಾಖಾ ವಿಚಾರಣೆ ನಡೆಸಲು ಸಹಾಯಕ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಎ ಉಪವಿಭಾಗ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ, ಆದೇಶ ಹೊರಡಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 437 ಪೊಸಿಪ 2006, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಅರುಣ್ ಗೋಡಬೋಲೆ ಡಿವೈ.ಎಸ್.ಪಿ. ಹಾಲಿ ಐಜಿಪಿ ರವರ ಕಛೇರಿ ಬೆಳಗಾಂ (ಹಿಂದೆ ಕೊಪ್ಪಳ ಉಪವಿಭಾಗ) ಮತ್ತು ಶ್ರೀ ಬಸವರಾಜ್ ಎಪಿಸಿ 156, ಡಿಎಆರ್ ಕೊಪ್ಪಳ ಜಿಲ್ಲೆ ಇವರುಗಳ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಗಳು 1965/89ರ ನಿಯಮ 6 ಮತ್ತು 8 ರನ್ವಯ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿದೆ.

ಈ ಇಲಾಖಾ ವಿಚಾರಣೆಯನ್ನು ನಡೆಸಲು ಸಹಾಯಕ ಪೊಲೀಸ್ ಅಧೀಕ್ಷಕರು ಗುಲ್ಬರ್ಗಾ ಎ ಉಪವಿಭಾಗ ಇವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿದೆ.

ಈ ಇಲಾಖಾ ವಿಚಾರಣೆಯನ್ನು ನಿಯಮಾನುಸಾರ ನಡೆಸಿ ಮೂರು ತಿಂಗಳೊಳಗಾಗಿ ಸರ್ಕಾರಕ್ಕೆ ಅಂತಿಮ ವರದಿ ಸಲ್ಲಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 352

**ಆರ್ಥಿಕ ಸಚಿವಾಲಯ**

**ವಿಷಯ:** ಕರ್ನಾಟಕ 5ನೇ ರಾಜ್ಯ ವೇತನ ಆಯೋಗದ ರಚನೆ – ಆಯೋಗದ ಅವಧಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಆಇ 11 ಎಸ್‌ಆರ್‌ಪಿ 2003 ದಿನಾಂಕ: 21.6.2005

2) ಸರ್ಕಾರಿ ಆದೇಶ ಸಂಖ್ಯೆ: ಆಇ 11 ಎಸ್‌ಆರ್‌ಪಿ 2003 ದಿನಾಂಕ: 28.7.2005

3) ಸರ್ಕಾರಿ ಆದೇಶ ಸಂಖ್ಯೆ: ಆಇ 11 ಎಸ್‌ಆರ್‌ಪಿ 2003, ದಿನಾಂಕ: 20.12.2006

4) ಕಾರ್ಯದರ್ಶಿ, ಕರ್ನಾಟಕ 5ನೇ ರಾಜ್ಯ ವೇತನ ಆಯೋಗ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ರಾವೇಆ 09 ಆಡಳಿಯ / 2006 ಇನಾಂಕ: 21.03.2007

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 21.6.2005ರ ಆದೇಶದಲ್ಲಿ ರಾಜ್ಯ ಸರ್ಕಾರಿ ನೌಕರರ ವೇತನ ಶ್ರೇಣಿಗಳನ್ನು ಪರಿಷ್ಕರಿಸಲು ಮತ್ತು ನೂತನ ವೇತನ ರಚನೆ ಇತ್ಯಾದಿಗಳನ್ನು ರೂಪಿಸಲು ಶ್ರೀ ಸಿ. ಗೋಪಾಲ ರೆಡ್ಡಿ, ನಿವೃತ್ತ ಕೇಂದ್ರ ಸರ್ಕಾರದ ಕಾರ್ಯದರ್ಶಿಗಳು ಇವರ ಅಧ್ಯಕ್ಷತೆಯಲ್ಲಿ ಏಕ ಸದಸ್ಯ 5ನೇ ರಾಜ್ಯ ವೇತನ ಆಯೋಗವನ್ನು ರಚಿಸಿ, ಮೇಲೆ (2) ರಲ್ಲಿ ಓದಲಾದ ದಿನಾಂಕ 28.7.2005ರ ಸರ್ಕಾರದ ಆದೇಶದಲ್ಲಿ, ಸದರಿ ಆಯೋಗದಲ್ಲಿ 40 ವಿವಿಧ ವರ್ಗದ ಹುದ್ದೆಗಳನ್ನು ಸೃಜಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ 20ನೇ ಡಿಸೆಂಬರ್ 2006ರ ಆದೇಶದಲ್ಲಿ, ಕರ್ನಾಟಕ 5ನೇ ರಾಜ್ಯ ವೇತನ ಆಯೋಗವು ತನ್ನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲು ಮತ್ತು ಆಯೋಗದ ಇತರ ಕಾರ್ಯಕಲಾಪಗಳನ್ನು ಸಮಾಪನಗೊಳಿಸಲು ಅನುಕೂಲವಾಗುವಂತೆ ಆಯೋಗದ ಅವಧಿಯನ್ನು ದಿನಾಂಕ 30.4.2007ರವರೆಗೆ ವಿಸ್ತರಿಸಲು ಹಾಗೂ ಆಯೋಗಕ್ಕೆ ಮಂಜೂರಾದ ಎಲ್ಲಾ ಹುದ್ದೆಗಳ ಅವಧಿಯನ್ನು ದಿನಾಂಕ 30.4.2007ರ ವರೆಗೆ ವಿಸ್ತರಿಸಲು ಮಂಜೂರಾತಿ ನೀಡಲಾಗಿತ್ತು.

ಮೇಲೆ (4)ರಲ್ಲಿ ಓದಲಾದ ದಿನಾಂಕ: 21.3.2007ರ ಪತ್ರದಲ್ಲಿ, ಕಾರ್ಯದರ್ಶಿಗಳು, ಕರ್ನಾಟಕ 5ನೇ ರಾಜ್ಯ ವೇತನ ಆಯೋಗ ಇವರು ಆಯೋಗದ ಲೆಕ್ಕಪತ್ರಗಳನ್ನು ಮಹಾಲೇಖಪಾಲರಿಂದ ತನಿಖೆ ಮಾಡಿಸಿ ಆಯೋಗದ ಇತರ ಕಾರ್ಯಕಲಾಪಗಳನ್ನು ಸಮಾಪನಗೊಳಿಸಲು ಇನ್ನಷ್ಟು ಕಾಲಾವಕಾಶ ಬೇಕಾಗಿರುವುದರಿಂದ ಆಯೋಗದ ಅವಧಿಯನ್ನು ಪುನಃ ದಿನಾಂಕ 31.5.2007ರವರೆಗೆ ವಿಸ್ತರಿಸುವಂತೆ ಸರ್ಕಾರವನ್ನು ಕೋರಿದ್ದಾರೆ ಮತ್ತು ಈ ಮುಂದುವರೆದ ಅವಧಿಯಲ್ಲಿ ಆಯೋಗದ ಕಾರ್ಯಕಲಾಪಗಳನ್ನು ಸಮಾಪನಗೊಳಿಸಲು ಬೇಕಾಗುವ ಅವಶ್ಯಕ ಸಿಬ್ಬಂದಿಯನ್ನು ಮಾತ್ರ ಉಳಿಸಿಕೊಳ್ಳಲಾಗುವುದೆಂದು ತಿಳಿಸಿರುತ್ತಾರೆ. ಸರ್ಕಾರವು ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 11 ಎಸ್‌ಆರ್‌ಪಿ 2003, ಬೆಂಗಳೂರು, ದಿನಾಂಕ: 11ನೇ ಏಪ್ರಿಲ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಕರ್ನಾಟಕ 5ನೇ ರಾಜ್ಯ ವೇತನ ಆಯೋಗವು ಆಯೋಗದ ಲೆಕ್ಕಪತ್ರಗಳನ್ನು ಮಹಾಲೇಖಪಾಲರಿಂದ ತನಿಖೆ ಮಾಡಿಸಿ ಆಯೋಗದ ಇತರ ಕಾರ್ಯಕಲಾಪಗಳನ್ನು ಸಮಾಪನಗೊಳಿಸಲು ಇನ್ನಷ್ಟು ಕಾಲಾವಕಾಶ ಬೇಕಾಗಿರುವುದರಿಂದ ಆಯೋಗದ ಅವಧಿಯನ್ನು ದಿನಾಂಕ 31.05.2007ರ ವರೆಗೆ ವಿಸ್ತರಿಸಲು ಸರ್ಕಾರವು ಹರ್ಷಿಸುತ್ತದೆ.

ಈ ಅವಧಿಯಲ್ಲಿ ಅವಶ್ಯಕವಾಗಿರುವ ಸಿಬ್ಬಂದಿಯನ್ನು ಮಾತ್ರ ಉಳಿಸಿಕೊಂಡು ಇತರ ಸಿಬ್ಬಂದಿಯ ಸೇವೆಯನ್ನು ಬಿಡುಗಡೆಗೊಳಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶದ ಮೇರೆಗೆ ಮತ್ತು ಅವರ ಹೆಸರಿನಲ್ಲಿ,

**ಎನ್.ಟಿ. ನಾಯ್ಕ್**

ಸರ್ಕಾರದ ಉಪ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸೇವೆಗಳು–2)

ಪಿಆರ್ 680

## FORESTS, ECOLOGY AND ENVIRONMENT SECRETARIAT

**Subject:-** Diversion of 7.85 ha. of forest land of renewal of M.L. No. 329(A) in favour of Shri M.Channakeshava Reddy for mining of iron ore in Lakkihalli SF, Hosadurga taluk, Chitradurga district.

**Read:-** 1) Letter No. A5 (1) MNG.CR.11/02-03, dated: 16.12.2006 of the Principle Chief Conservator of Forests, Bangalore.

2) State Government letter No. FEE 204 FFM 2006, dated: 04.01.2007.

3) Government of India Ministry of Environment and Forests, Regional Office, South Zone, Bangalore letter No. 4-KRC277/2007-BAN/585, dated: 8th August 2007.

4) Letter No. A5(1) MNG.CR.11/02-03, dated: 29.08.2007 of the Principal Chief Conservator of Forests, Bangalore.

5) State Government letter No. FEE 204 FFM 2006, dated: 12.09.2007.

6) Government of India Ministry of Environment and Forests, Regional Office, South Zone, Bangalore letter No. 4- KRC277/2007-BAN/778, dated: 13th September 2007.

**PREAMBLE:**

The Principal Chief Conservator of Forests had sent proposal vide his letter dated: 16.12.2006 read at (1) above for diversion of 7.85 ha. of forest land for renewal of ML No. 329 (A) for extraction of iron ore in Lakkihally SF of Lakkihally and Kenkere village, Hosadurga taluk, Chitradurga district in favour of Shri M. Channakeshava Reddy for a period 20 years co-terminus with the lease granted under MMDR Act, 1957, subject to certain conditions.

The proposal of the Principal Chief Conservator of Forest was recommended to Government of India, Ministry of Environment and Forests, Regional Office, South Zone, Bangalore vide State Government letter dated: 04.01.2007 read at (2) above seeking prior approval of Government of India under section 2 of the Forest (Conservation) Act, 1980.

After careful consideration of the proposal of the State Government, Government of India vide its letter dated: 8th August 2007 read at (3) above has agreed in-principle (Stage-I) subject to the fulfilment of certain conditions.

In compliance of the conditions stipulated by Government of India vide its letter dated: 8th August 2007 the Principle Chief Conservator of Forests vide his letter dated: 29.08.2007 read at (4)

above has sent his compliance report. This compliance report was forwarded to Government of India vide State Government letter dated: 12.09.2007 read at (5) above.

Government of India vide its letter dated: 13th September 2007 read at (6) above has conveyed its final approval (Stage-II) under Section 2 of the Forest (Conservation) Act, 1980 for diversion of 7.85 ha. of forest land for renewal of ML No. 329 (A) for extraction of iron ore in Lakkihally SF of Lakkihally and Kenkere village, Hosadurga taluk, Chitradurga district in favour of Shri M. Channakeshava Reddy for a period 20 years co-terminus with the lease granted under MMDR Act, 1957, subject to certain conditions, Hence the order.

**Government Order No. FEE 204 FFM 2006, Bangalore, Dated 18th September, 2007**

In the circumstances explained above, Government is pleased to accord sanction under Section 2 of the Forest (Conservation) Act, 1980 for diversion of 7.85 ha. of forest land for renewal of ML No. 329(A) for extraction of iron ore in Lakkihally SF of Lakkihally and Kenkere village, Hosadurga taluk, Chitradurga district in favour of Shri M. Channakeshava Reddy for a period 20 years co-terminus with the lease granted under MMDR Act, 1957, subject to the following conditions.

1. Legal status of forest land shall remain unchanged.
2. The demarcation of the proposed forest area shall be carried out by erecting cement concrete pillars duly numbered at an interval of 20 meters at the cost of user agency.
3. No new construction of building for any purpose will be taken up in the forest area diverted for the project.
4. The funds received from the user agency towards NPV under this project shall be transferred to Ad-hoc CAMPA in account number CA 1582 of Corporation Bank, Block-II, CGO Complex, Phase-I, Lodhi Road, New Delhi-110 003 immediately under intimation to Government of India.
5. The mining activity in the forest area shall be carried out as per the approved mining plan from the IBM.
6. The user agency shall obtain Environmental Clearance under the Environment (Protection) Act, 1986.
7. The consent of State Pollution Control Board shall be obtained under Air and Water Act before the commencement of mining operation and it shall be renewed every year.
8. Trees shall be felled only when it becomes necessary and in the supervision of State Forest Department.
9. No labour camps shall be established on the forest land.
10. Sufficient firewood shall be provided by the user agency to the labourers at the project cost after purchase from the State Forest Development Corporation.
11. Reclamation plan shall be executed by the user agency from the very first year of mining and an annual report shall be sent to the Nodal Officer and the Regional Office, Bangalore.
12. The user agency shall protect the top soil at the project cost.
13. The user agency shall ensure that there should be no damage to the wildlife.

